

"ಪಥಿಕದ ನೆನಹು"

"ಪಥಿಕ" ಮೂರುಸಾವಿರಮಠದ ಜಗದ್ಗುರುಗಳವರ ಪ್ರಪ್ರಥಮ ಕವನ ಸಂಕಲನ ತಮ್ಮ ಕವನ ಕುಸುಮಗಳಿಂದ ಈ ಕಾವ್ಯ ಮಾಲೆಯನ್ನು ಕಟ್ಟಿದ್ದಾರೆ......

ಇಲ್ಲಿ ಕವಿಯು ನಿಜವಾದ ಜೀವನ ದರ್ಶನವನ್ನು ಕಂಡುಕೊಂಡಿದ್ದಾನೆ. ಆದ್ದರಿಂದ ಕವಿವಾಣಿ ನಮ್ಮ ಮನಸ್ಸನ್ನು ಮುಟ್ಟುತ್ತದೆ, ಬುದ್ಧಿಯನ್ನು ತಟ್ಟುತ್ತದೆ, ಸತ್ಯಪೂರ್ಣ ಸಂದೇಶವನ್ನು ಸಾರುತ್ತದೆ.

ಶ್ರೀ ಜ. ಚ. ನಿ.



ಬೆಲೆ: ಎರಡು ರೂಪಾಯಿಗಳು

ಶ್ರೀ ಜಗದ್ಗುರು ಮೂರುಸಾವಿರಮಠದ ಗ್ರಂಥ ಮಾಲಾ ನಂ. ೫೨

# ಪಥಿಕ

( ಕವನ ಸಂಗ್ರಹ )

ಕರ್ತರು:

**ಮಹಾಂತದೇವರು ಚಿತ್ತರಗಿ**

ಕಾವ್ಯತೀರ್ಥ, ಸಾಹಿತ್ಯರತ್ನ ವೇದಾಂತಶಾಸ್ತ್ರಿ

(ಸದ್ಯದ ಮೂರುಸಾವಿರಮಠದ ಶ್ರೀಜಗದ್ಗುರುಗಳು.)

ಪ್ರಕಾಶಕರು

ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ,
ಮೂರುಸಾವಿರಮಠ, ಹುಬ್ಬಳ್ಳಿ.

೧೯೭೨.



ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ, ಹುಬ್ಬಳ್ಳಿ.

# ಮುನ್ನುಡಿ

"ಕವಿಃ ಕರೋತಿ ಕಾವ್ಯಾನಿ ಲಾಲಯತ್ಯುತ್ತಮೋಜನಃ
ತರುಃ ಪ್ರಸೂತೇ ಪುಷ್ಪಾಣಿ ಮರುದ್ವಹತಿ ಸೌರಭಮ್"

೧

ಬಿಡುವಿಲ್ಲದಂತೆ ಬರೆವಣಿಗೆಯಲ್ಲಿ ತೊಡಗಿರುವಾಗ ಈ 'ಪಥಿಕ' ಬಂದು ಭೇಟಿಯಿತ್ತ. ಬಯಕೆಯನ್ನು ತೋರಿದ. ಮುಂದಿನ ದಾರಿಗೆ 'ಬುತ್ತಿ'ಬೇಕೆಂದ. ಬುತ್ತಿಯ ಕಟ್ಟಿಕೊಡಲು ನಾವಾರು. ನೀನಾರು ಎಂದು ಕೇಳಬೇಕೆಂದಿದ್ದೆವು. ಅನಿತರಲ್ಲಿ ಶಿವಯೋಗ ಮಂದಿರದ ಹತ್ತಿರದ ಸಂಬಂಧ ನೆನವಿಗೆ ಬಂದು ನಿಂತಿತು. ಜೊತೆಗೆ 'ಪಥಿಕ' ತಾಯಿ – ತಂದೆಗಳಿಲ್ಲದ, ಮಡದಿ ಮಕ್ಕಳಿಲ್ಲದ ತಬ್ಬಲಿ. ಬಹುದೂರದಿಂದ ಬಳಲಿ ಬಂದ ಬಂಧು. ಇಲ್ಲೆನಲು – ಆಗದೆನಲು ಸಾಧ್ಯವಿಲ್ಲದಾಯಿತು. ಬುತ್ತಿ (ಮುನ್ನುಡಿ)ಯ ಕಟ್ಟಬೇಕಾಯಿತು. ಬುತ್ತಿಗೆ ಬೇಕಾದ ಪದಾರ್ಥವೆಲ್ಲ ಪಥಿಕನದೆ! ಕಲೆ ಹಾಕಿ ಕಟ್ಟಿಕೊಟ್ಟ ಕೆಲಸ ನಮ್ಮದು. ಎಂತಹದನ್ನಾದರೂ ಎಷ್ಟನ್ನಾದರೂ ಕಟ್ಟಿಕೊಡೋಣವೆಂದರೆ 'ಪಥಿಕ' ಒಪ್ಪದೆ ಹೋದ. ಪಥಿಕ ಒಳ್ಳೆ ರಸಿಕ. ಒತ್ತಾಸೆಯುಳ್ಳವ. ಬುತ್ತಿ ಒಪ್ಪಾಗಿ ಒಳಿತಾಗಿ ಮಿಗಿಲಾಗಿ ಇರಬೇಕೆಂಬ ಇಚ್ಛೆ ತೋರಿದ. ರೂಪು ರುಚಿಗಳ ಮಾತು ಹೇಗಾದರೂ ಇರಲಿ ಹೆಚ್ಚಾಗಿ ಕಟ್ಟಿಕೊಡಬೇಕಾಯಿತು.

ಶಿವಯೋಗಮಂದಿರದ ಸಾಧಕರಲ್ಲಿ ಕವಿಮಾರ್ಗದಲ್ಲಿ ಹೆಜ್ಜೆಹಾಕಿದವರು ಅದೆಷ್ಟು ಜನ? ತೀರ ಕಮ್ಮಿಯೆಂದರೆ ಅಲ್ಲಗಳೆಯುವಂತಿಲ್ಲ. ಮೂರು

ನಾಲ್ಕು ಸಂಖ್ಯೆಗೆ ಮೀರಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಕಾವ್ಯರಸ ಮಾಧುರ್ಯಕ್ಕೆ ಮನಸೋಲಿದು ಕವಿಗಳಾದವರಲ್ಲಿ ಶ್ರೀ ಮಹಾಂತದೇವರು ಒಬ್ಬರು. ಅವರೊಬ್ಬ ತರುಣ ಕವಿ. ಅವರ ಈ 'ಪಥಿಕ'ವು ಅಂಕು ರಾರ್ಪಣ. ಆದರೂ ಈ ಎಳೆ ಹಸರು ಆಕರ್ಷಕವಾಗಿದೆ. ಅದರದೇ ಒಂದು ಮಾಟ. ಅದೇ ಒಂದು ನಲುಮೆಯ ನೋಟ.

'ಗಿಡ ಹೂವನ್ನು ಬಿಡುತ್ತದೆ. ಗಾಳಿ ಆ ಹೂಗಂಪನ್ನು ಹೊತ್ತು ತಂದು ಬೀರುತ್ತದೆ. ಕವಿ ಕವನಗಳನ್ನು ರಚಿಸುತ್ತಾನೆ. ಉತ್ತಮರು ಅವನ್ನು ಲಾಲಿಸುತ್ತಾರೆ '.

ವಸಂತ ಋತುವಿನಲ್ಲಿ ಗಿಡ ಹೂ ಬಿಡುವಂತೆ ಕಾವ್ಯಗಳನ್ನು ಕಟ್ಟು ವುದು, ಋಷಿ ಕವಿಯಾದವರಿಗೆ ನಿಸರ್ಗಧರ್ಮ. ಆ ಕಾವ್ಯ ಗಂಧವನ್ನು ಬಿಚ್ಚಿ ಬೀರುವುದು ಬಲು ಬಿಗಿಯಾದ ಬದುಕು. ಹೇಳಿ ಮೆಚ್ಚಿಸಬಹುದು, ಕೇಳಿ ಮೋದಿಸಬಹುದು, ಆಳವನ್ನು ಅಳೆವುದು ವಿಮರ್ಶಕನಾಗದೆ ಸಾಧ್ಯ ವಿಲ್ಲ. ಆ ಮಾರ್ಗದಲ್ಲಿ ಪಳಗಿದ್ದರೆ, ಆ ಕಲೆಯನ್ನು ಸಂಗಳಿಸಿದ್ದರೆ ಅದ ರಲ್ಲಿಯೂ ಅನ್ಯಾದೃಶವಾದ ಆನಂದವಿದೆ. ಆದರೆ ಆ ಶಕ್ತಿ ಬೇಡವೆ? ಅಂತು ಈ ಕಷ್ಟ ಮತ್ತು ಸುಖಗಳಿಂದ ಕೂಡಿದ ಲಾಲನೆಯ (ಮುದ್ದು ನುಡಿಯ) ಕೆಲಸಕ್ಕೆ ನಮ್ಮನ್ನು ತೊಡಗಿಸಿದ್ದಾರೆ ಶ್ರೀ ಮಹಾಂತದೇವರು. ಇದಕ್ಕೆ ಅವರ ಆತ್ಮೀಯ ವಿಶ್ವಾಸವೇ ವಿಶೇಷ ಕಾರಣ.

ಎರಡನೆಯದಾಗಿ ಸತ್ಯ ಶುದ್ಧಭಾವದಿಂದ ಶಾಶ್ವತ ದೃಷ್ಟಿಯಿಂದ ಕನ್ನಡ ಸಾಹಿತ್ಯ ಕೃತಿ ಪ್ರಕಟನೆ, ಶಿವಶರಣರ ಸಮ್ಮೇಲನ ಇವುಗಳಿಗೆ ತಮ್ಮ ತ್ರಿಕರಣ ಪೂರ್ವಕ ಸೇವೆ ಸಲ್ಲಿಸುತ್ತಿರುವ 'ತ್ಯಾಗವೀರ' ಶ್ರೀ ಶಿವ ಶಂಕರಪ್ಪನವರು ಶಿವಲಿಂಗಪ್ಪನವರು ಚಿತ್ತರಗಿ ಇವರು ಈ 'ಪಥಿಕ' ಪ್ರಕಾಶನಕ್ಕೆ ಕಾರಣಕರ್ತರಾಗಿ ನಿಂತಿದ್ದಾರೆ. ಇವರು ಬ್ಯಾಂಕ್ ಕ್ಲಾರ್ಕ ರಾಗಿರುವರಂತೆ. ಭಾಷಾ ಕ್ಲರ್ಕರೂ ಆಗುತ್ತಿರುವುದು ಆದರ್ಶವಾಗಿದೆ. ಇವರ ಭಾಷಾಸೇವೆ ಮೆಚ್ಚತಕ್ಕುದಾಗಿದೆ. ಇವರೂ ಸಹ ಉತ್ತಮವಾದ

ಮುನ್ನುಡಿಯನ್ನು ಬಯಸಿ ಬೆನ್ನುಬಿಸಿಕೊಂಡಿದ್ದಾರೆ. ಹೀಗೆ ಇಬ್ಬರ ಹೃದಯ ಬೇಡಿಕೆಯನ್ನು ಪೂರೈಸದಿರುವುದು ಹೇಗೆ ತಾನೆ ಸಾಧ್ಯ ?

ಶ್ರೀ ಮಹಾಂತದೇವರನ್ನು ನಾವು ಮೊದಲಿನಿಂದಲೂ ಬಲ್ಲೆವು. ಸುಮಾರು ಇಪ್ಪತ್ತು ವರುಷಗಳ ಮಾತು. ಶಿವಯೋಗ ಮಂದಿರದಲ್ಲಿ ನಾವು ಪ್ರೌಢ ಶಿಕ್ಷಣವನ್ನು ಪಡೆಯುತ್ತಿರುವಾಗ ಇವರು ಪ್ರಾಥಮಿಕ ಶಿಕ್ಷಣ ಪಡೆಯುತ್ತಿದ್ದರು. ಅಂದು ಇವರು ತೀರ ಎಳೆಯುವರು. ಸಹಜ ಮೃದು ಹೃದಯರು. ನಿರ್ಮಲ ಮನಸ್ಕರು. ಆ ಚಿಕ್ಕ ವಯಸ್ಸಿನಲ್ಲಿಯೇ ತಂದೆತಾಯಿಗಳನ್ನು ಮನೆಮಠಗಳನ್ನು ಬಂಧುಬಳಗವನ್ನು ಸುಖ ಸಂಪದಗಳನ್ನು ತ್ಯಜಿಸಿ ವ್ಯಾಸಂಗಕ್ಕಾಗಿ ಬಂದು ನಿಂತರು ಆಶ್ರಮದ ನಿಬಂಧನೆಗಳಿಗೆ ನಡಕಟ್ಟಿದರು. ಸನ್ಯಾಸಿಯಾಗಲು ಸನ್ನದ್ಧರಾದರು ಆದರೆ ಬರೀ ಸನ್ಯಾಸಿ ಆಗಲಿಲ್ಲ. ಜೊತೆಗೆ ಸಾಹಿತಿಯೂ ಆದರು,ಇದು ಅವರ ಜೀವನದ ವ್ಯಾಸಂಗದ ವೈಶಿಷ್ಟ್ಯ. ಕಾವ್ಯರಸಾಸ್ವಾದ, ಸಜ್ಜನಸಂಗ, ಯೌಗಿಕ ಸಂಪತ್ತು ಇವು ಮೂರು ಶಿವಯೋಗ ಮಂದಿರದಲ್ಲಿ ಸಿಕ್ಕುವ ಸಂಪಾದನೆಗಳು. ಶ್ರೀ ಮಹಾಂತದೇವರು ಮೊದಲಿನವೆರಡನ್ನು ಸಂಪೂರ್ಣ ಸಂಗಳಿದ್ದಾರೆ ಅದರಲ್ಲಿಯೂ ಕಾವ್ಯ ಸಾಹಿತ್ಯದಲ್ಲಿ ಅವರಿಗೆ ಅತಿಶಯಕಾಂಕ್ಷೆ. ಅದರಿಂದ ಅವರಿಂದು “ಕಾವ್ಯತೀರ್ಥರು”. “ಸಾಹಿತ್ಯರತ್ನ”ರು. ಇಷ್ಟಕ್ಕೆ ಅವರ ವ್ಯಾಸಂಗ ನಿಂತಿಲ್ಲ. ಇನ್ನು ಮುಂದುವರಿದಿದೆ. ವಿದ್ಯಾ ಕೇಂದ್ರವಾದ ಕಾಶಿ (ಬನಾರಸ) ಯಲ್ಲಿ ಅದಕ್ಕಾಗಿ ನೆಲೆನಿಂತಿದ್ದಾರೆ. ಚಿತ್ತರಗಿ ವಿರಕ್ತ ಮಠದ ಉತ್ತರಾಧಿಕಾರಿಗಳಾಗಿದ್ದಾರೆ.

“ಪಥಿಕ” ಇವರ ಪ್ರಪ್ರಥಮ ಕವನ ಸಂಕಲನ. ತಮ್ಮ ಕವನ ಕುಸುಮಗಳಿಂದ ಈ ಕಾವ್ಯ ಮಾಲೆಯನ್ನು ಕಟ್ಟಿದ್ದಾರೆ. ಭಾವ ಸೂತ್ರದಿಂದ ಬಿಡಿಬಿಡಿಯಾದ ಹೂವುಗಳನ್ನು ಏಕಸೂತ್ರಕ್ಕೆ ತಂದಿದ್ದಾರೆ. ಇದು ಇವರ ಕುಶಲತೆ. ಇದು ಇವರ ಈ ಕಾವ್ಯ ವೈಶಿಷ್ಟ್ಯ. ಅನೇಕರು ಬಿಡಿ ಹೂವುಗಳನ್ನೇ ತಂದು ಮುಂದೆ ಸುರಿಯಬಲ್ಲರು ಇದಕ್ಕಿಂತ ಏಕಸೂತ್ರತಗೆ ತಂದು ಮಾಲೆಯಾಗಿಸಿ ಮುಂಡಿಡುವುದೆ ಮನೋಜ್ಞಕಾರ್ಯ. ಇಂದಿನ

ಕವನ ಸಂಗ್ರಹಗಳಿಗೆ ಇದೇ ಒಂದು ಕಳೆ ಕಲೆ! ಇದನ್ನು ಈ ಕಾವ್ಯದಲ್ಲಿ ನಸುನೋಡುವುದೇ ಈ ಮುನ್ನುಡಿಯ ಮುಂಗುರಿ!

೨

ಶ್ರೀ ಮಹಾಂತದೇವರೇ "ಪಥಿಕರು." ಅವರ ಪಥ ಕಾವ್ಯಕಲೆ. ಅವರು ಬೇಡಿ ಬಯಸಿದುದು ತಿಳಿವಿನ ಬೆಳಗು. ಸೇರಬಯಸಿದುದು ಕವಿತನದ ಮಾಮನೆ.

ಅವರು ಬಯಸಿದ ಹಾದಿ ಹಸನಾಗಿಲ್ಲ, ಸಮವಾಗಿಲ್ಲ: ಸುಗಮವಾಗಿಲ್ಲ. ಅಲ್ಲಿ ಹಳ್ಳ ತಿಟ್ಟಗಿಳಿವೆ ಮುನ್ನಡೆದರೆ ದೊಡ್ಡ ಬೆಟ್ಟಗಳಿವೆ. ಮುನ್ನೋಡಿದರೆ ಹೊಳೆ ಹಳ್ಳಗಳಿವೆ; ಜಲಚರ ಪ್ರಾಣಿಗಳಿವೆ. ಸಾಲದ್ದಕ್ಕೆ ಬಿರುಗಾಳಿ ಬೇರೆ ಭರದಿಂದ ಬೀಸುತಿದೆ. ಧೂಳಿದೂಸರನ್ನು ಮೈಯ್ಮೇಲೆ ತಂದೆರಚುತಿದೆ. ಇವರಮೇಲೆ ಕಾರ್ಮೋಡಗಳ ಆವರಣ ಬೇರೆ, ಆರ್ಭಟ ಬೇರೆ; ಕಾಳರಾತ್ರಿಯ ಕಾಟ ಬೇರೆ, ಇಷ್ಟು ಕಷ್ಟವಿದ್ದರೂ ಹೇಗಾದರೂ ಮಾಡಿ ಸಾಹಸದಿಂದ ಸಾಗಬಹುದೆಂದರೆ ಪಥಿಕ ಕುರುಡ, ಅಷ್ಟೇ ಅಲ್ಲ ಕವಿ ತನ್ನ ಆತ್ಮನೊಡನೆ ನಮ್ಮನ್ನೂ ಮುನ್ನಡಿಸುತ್ತಾನೆ. ಪಥಕನೊಡನೆ ಹೋದರೆ ನಾವು ಕಾಣುವದೇನನ್ನು ?

> "ಸೋಲಿನಲಿ ಇರುತಿರಲು ಮುಂದಿನ ಹಿರಿಗುರಿಯ
> ದಾರಿಯನು ಮರೆಯದಿರ್ಕೆ
> ದಾರಿಯಾ ನಡೆವವನು ಎಡಹದಲೆ ಇರುವನೇಂ
> ಎಡಹಿದೂ ಹೆದರದಿರ್ಕೆ"

ಕವಿಗೆ ಕಣ್ಣಿಲ್ಲದಿದ್ದರೂ ಯಾವುದೋ ಕೋಲುಮಿಂಚಿನ ಕಳೆಯಿದೆ. ಕಾಲಿಲ್ಲದಿದ್ದರೂ ಕುಟೀರ ಸೇರುವ ಬಲುಮೆಯಿದೆ. ಇಂತಹ ಕವಿಯ ಜೊತೆಗೆ ಹೋಗುವ ನಮಗೆ ಕಾಲಿದ್ದರೂ ಸೋತು ನಿಂತಿದ್ದೇವೆ. ಕಣ್ಣಿದ್ದರೂ ಮುಂದಿನ ಗುರಿಯನ್ನು ಮರೆತಿದ್ದೇವೆ. ಎಡಹಿ ಎದೆಗೆಟ್ಟಿದ್ದೇವೆ.

ಹೀಗಿದ್ದರೂ ಕವಿ ನಮ್ಮನ್ನು ಪ್ರಚೋದಿಸುತ್ತಾನೆ. ಬಾಳಿನಲ್ಲಿ ಸೋಲು ಬರುವದು ಸಹಜ ಅದೇ ಅವಮಾನವೆಂದು ಭಾವಿಸಿ ಆ ಸೋಲಿನ ಸೆಳವಿಗೆ ಸಿಕ್ಕು 'ಮುಂದಿನ' ಹಿರಿ ಗುರಿಯ ಮರೆಯದಿರೈ ಎಂದು ನಮ್ಮ ಮೆದು ಳಿಗೆ ತಿಳಿಹೇಳುತ್ತಾನೆ. ನಡೆವವನು ಎಡಹುವುದು ನಿಸರ್ಗ. 'ಎಡಹಿದರೂ ಹೆದರದಿರೈ' ಎಂದು ಹೃದಯಕ್ಕೆ ಧೈರ್ಯ ತುಂಬುತ್ತಾನೆ. ಹೀಗೆ ಮೆದು ಳನ್ನೂ ಎದೆಯನ್ನೂ ಕಾಪಾಡುವದಕ್ಕಿಂತ ಬೇರೆ ಕವಿಕ್ರಿಯೆಯೇನು ?

"ನೋಡದಿರು ಬೇಡದಿರು ಹಿಂದಿನಾ ದಾರಿಯನು
ನಡೆಮುಂದೆ ದೃಢ ಮನದಿ
ಶಿಲ್ಪಿಗನ ಶಿಲೆಯೊಡೆದು ಹೋದರವ ಚಿತ್ರವನು
ಕಡೆಯುವದ ಬಿಡುವನೇನು ? ''

'ನಡೆಮುಂದೆ' ಏನು ಭಾವಪೂರ್ಣವಾದ ಮಾತಿದು. ಸತ್ ಪ್ರೇರ ಣೆಯ ಪೂರ್ಣ ಪ್ರವಾಹವನ್ನೇ ಇಲ್ಲಿ ಸಂದಿಸುತ್ತೇವೆ. ಕಾಲು ಸೋತ ನಾವು ಆ ವೇಗದೊಡನೆ ಮುನ್ನಡೆಯುತ್ತೇವೆ. ಕವಿಗೆ ಮುಂಗುರಿಯಲ್ಲಿ ಅದೆಂತಹ ನಿಶ್ಚಿತ ಭಾವವಿದೆ. ಅದೆಂತಹ ನಿಶ್ಚಲವಿದೆ ನಿಜವಾಗಿಯೂ ಕವಿ ಅನುಭಾವಿ ಪಥಿಕ. ಭಗೀರಥ ಸಾಹಸಿಕ. ಅವನಿತ್ತ ಶಿಲ್ಪಿಗನ ಉಪಮೆ; ಓದುಗರ ಮನಸ್ಸನ್ನು ಕೆಸರಲ್ಲಿ ಕಲ್ಲಿಟ್ಟಂತೆ ನೇರವಾಗಿ ನಾಟುತ್ತದೆ. ನಾಟಿ ಮುಂದೆ ನಡೆಸುತ್ತದೆ.

ಕವಿ ತಾನೂ ನಡೆದು ನಮ್ಮನ್ನೂ ನಡೆಯಿಸಿಕೊಂಡು ಒಂದು ನಿಲು ಕಡೆ (ಊರಿ)ಗೆ ಬಂದು ನಿಲುಕುತ್ತಾನೆ. ನಿಲುಕಿದರೇನಾಯ್ತು ? ನಡೆದು ಬಂದ ಪರಿಶ್ರಮದ ಫಲವಾಗಿ ಹಸಿವು ಹೆಚ್ಚಿದೆ. ಧನಿಕನೊಬ್ಬನ ದರ್ಶನ ವಾಗಿದೆ. ಆತನನ್ನು ಬೇಡದೆ ವಿಧಿಯಿಲ್ಲ. ಬೆಂದ ಒಡಲ ಹೊರೆಯದೆ ಗತಿ ಯಿಲ್ಲ. ಕವಿ 'ಭಿಕ್ಷುಕ'ನಾದ ಕೈಯೊಡ್ಡಿ ಬೇಡಿದ. ಹೀಗೆಂದು ಹೇಳಿದ.

"ಕಲಿಕಾಲವಿಹುದೀಗ ನೀಡುವರು ಬಹಳಿಲ್ಲ
ಎಲ್ಲರನು ಕೇಳಿ ಬಂದೆ
ಉತ್ತರವನಿತ್ತರೈ 'ನಡೆಮುಂದೆ' ಸೀನಿಲ್ಲಿ
ನಿಲ್ಲದಿರು ಹೋಗು ಮುಂದೆ"

ಕವಿ, ಕಲಿಕಾಲದವರ ಸ್ವಭಾವವನ್ನು ಸಹಜವಾಗಿ ಸಮರ್ಪಕವಾಗಿ ಚಿತ್ರಿಸಿದ್ದಾನೆ. ಕಾಲಮಹಿಮೆಯಿಂದ ತ್ಯಾಗಗುಣದ ಮೇಲೆ, ಸವಿನುಡಿಯ ಮೇಲೆ ಕಪ್ಪುಕಲೆ ಮೂಡಿದೆ. ನೀಡುವವರಲ್ಲಿ ಹೋಗಲಿ ನುಡಿಯುವದರಲ್ಲಿಯೂ ಔದಾರ್ಯವಿಲ್ಲ, ಔಚಿತ್ಯವಿಲ್ಲ. ಬಹುಜನ ಜಿಪುಣರು ನೀಡದೆ 'ನಡೆಮುಂದೆ' * ಎಂದು ಗದರಿಸಿದರು. 'ಹೋಗುಮುಂದೆ' ಎಂದು ಮರಳಿ ಗುಡುಗಿದರು. ಅಯ್ಯೋ, ಅವರಿಗೆ ಕರುಳಿಲ್ಲ, ಕಣ್ಣಿಲ್ಲ.

"ಧನಕನಕ ಕೇಳದಲೆ ಇಂತಿವರು ಮಾಡುವರು
ಬಡಕೊಂಡೆ ಎನ್ನ ಕುಕ್ಷಿ
ಕೃಪೆಮಾಡು ಜವದಿಂದೆ ಅಂತರ್ಯಾಮಿ ಓ ಗುರುವೆ
ಬೇಡುವೆನು ಜ್ಞಾನಭಿಕ್ಷೆ !

ಕವಿ 'ಪಥಿಕ' ನಾಗಿ ಮುಂದೆ ನಡೆದು ಬಂದು ಹಸಿದು "ಭಿಕ್ಷುಕ" ನಾದುದು ಹೊಟ್ಟೆಗಾಗಿಯಲ್ಲ, ಹಿಡಿ ಹಿಟ್ಟಿಗಾಗಿಯಲ್ಲ; ಹೊನ್ನು ರತ್ನಗಳಿಗಾಗಿಯಲ್ಲ; ಅವನು ತನ್ನ ಹೊಟ್ಟೆಯನ್ನು ಬಡಕೊಂಡದ್ದು ಬರೀ ತನಗಾಗಿಯಲ್ಲ; ಜನರ ಹೀನ ಮನೋಭಾವಕ್ಕಾಗಿ, ಸ್ವಾರ್ಥ ಸಂಕುಚಿತತೆಗಾಗಿ ಅವನು ತನಗಾಗಿ ಬೇಡಿದ್ದು ಜ್ಞಾನಭಿಕ್ಷೆ ! ಅದನ್ನು ಕರುಣಿಸುವ ಗುರುಗಳು ಕಲಿಕಾಲದಲ್ಲಿ ಬಹಳಿಲ್ಲ. ಅದನರಿತ ಗುರು ಸಾವಿರಕ್ಕೊಬ್ಬ ಅಂತರಂಗವನ್ನು ಅರಿತವನೆ ಅರಿವವನೆ ಅಂತರ್ಯಾಮಿ. ಅವನೇ ಕರುಣಾಮಯಿ. ಅವನೇ ಶ್ರೀ ಗುರು. ಅಂಥವನಲ್ಲಿ ಈ ಕವಿ ಭಿಕ್ಷುಕನು ಬೇಡಿದ್ದಾನೆ ಜ್ಞಾನಭಿಕ್ಷವನು.

ಒಂದು ಬೇಡಿ ನೂರೊಂದು ಪಡೆದಿದ್ದಾನೆ ಪಥಿಕ. ಅದರಿಂದ ಅವನ ಆ ಕಾಳರಾತ್ರಿಯ ಕುರುಡ ಜೀವನದಲ್ಲಿ "ದೀಪಾವಳಿ"ಯ ಹಬ್ಬ ಓಡಿ ಬಂದಿದೆ. ದೀಪಗಳ ಸಾಲು ಕೂಡಿ ನಿಂತಿದೆ. ಕವಿಯ ಕನಸು ಹೊಂಗನ

---

* ಕವಿ ವಾಣಿಯಿಂದ ಬಂದ "ನಡೆಮುಂದೆ" ಎಂಬಲ್ಲಿಯೂ ಕಲಿಜನರ ಬಾಯಿಂದ ಬಂದ ಅದೇ "ನಡೆಮುಂದೆ" ಎಂಬಲ್ಲಿಯೂ ಇರುವ ಧ್ವನಿ ಭಾವಗಳ ವ್ಯತ್ಯಾಸವನ್ನು ಕಾಣಬೇಕು

ಸಾಗಿದೆ. ಅವನ ದೇಹ ದೇವಾಲಯವು ದೀಪಗಳ ಸಾಲಿನಿಂದ ರಾಜಿಸಿದೆ. ಮುತ್ತಿದ್ದ ಕತ್ತಲೆ ಹರಿದುಹೋಗಿ ಬೆಳಕಿನ ಒಬ್ಬುಳಿ ಮೂಡಿದೆ. ಶಾಂತಿ ನೆಲಸಿದೆ. ಸತ್ಯತೆಯು ಸಾರಿದೆ.

"ಹೃದಯದೀ ಪ್ರಣತೆಯೊಳು ಸದ್ಭಕ್ತಿ ತೈಲವನು
ಸುವಿಚಾರ ಬತ್ತಿಯನು ಹೊಸೆದಿಟ್ಟು ಹಚ್ಚಿದೊಡೆ
ಗುಡಿಯೊಳಗೆ ಮೆರೆಯುತ್ತ ಕುಳಿತಿರುವ ಈಶ್ವರನು
ಕೊಡುತಿಹನು ದರ್ಶನವ ಪರಂಜ್ಯೋತಿ ಬೆಳಗಿನೊಳು"

ಕವಿಯು ನಿಜವಾದ ಜೀವನ ದರ್ಶನವನ್ನು ಕಂಡುಕೊಂಡಿದ್ದಾನೆ ಕಳೆದು ಉಳಿವುದಾವುದೆಂಬುದನ್ನು ಅರಿತಿದ್ದಾನೆ. ಕಳೆಯೇರುವುದು ಯಾವುದ ರಿಂದ ಎಂಬುದನ್ನು ಅನುಭವಕ್ಕೆ ತಂದುಕೊಂಡಿದ್ದಾನೆ. ಅದರಿಂದ ಆ ಸಾಧನೆಯನ್ನು ಮಾಡಿ ಶ್ರೇಷ್ಠ ಸಿದ್ಧಿಯನ್ನು ಸಾಧಿಸಿದ್ದಾನೆ ಕವಿಯ ಕಾಯ ಚಿಕ್ಕದಾಗಿರಬಹುದು? ಕಣ್ಣು ಚಿಕ್ಕದಲ್ಲ. ನುಡಿಯು ಪರಿ ಕೊರತೆಯದಿರ ಬಹುದು. ನಡೆಯು ಗುರಿ ಕೊರತೆಯದಲ್ಲ. ಅದರಿಂದ ಕವಿವಾಣಿ ನಮ್ಮ ಮನಸ್ಸನ್ನು ಮುಟ್ಟುತ್ತದೆ. ಬುದ್ಧಿಯನ್ನು ತಟ್ಟುತ್ತದೆ. ಸತ್ಯಪೂರ್ಣ ಸಂದೇಶವನ್ನು ಸಾರುತ್ತದೆ.

ಅದೋ ಮೇಲಕ್ಕೆ ನೋಡು ಮುಗಿಲಲ್ಲಿ ಹಾರಾಡುತಿದೆ ಕವಿಯ ಕಾಂತಿಯುತ ಕಾಯವೆಂಬ "ಶಿವನಪುಟ್ಟಿ" ನಿನ್ನ ಪುಟ್ಟಿಯು ಹಾಗೆ ಮೇಲಕ್ಕೆ ಹಾರದೆಯೇ ಇಲ್ಲೆನ್ನುವೆಯಾ ? ಹಾಗಾದರೆ ಕೇಳು ಖಗೋಳ ಪಥಿಕನಾದ ಕವಿಯ ಬಾನುಲಿಯನ್ನು :

"ಹೃದಯಾಕಾಶದಿ ಏರಿಸು ಪುಟ್ಟಿ
ಅದರೊಳ್ ಜ್ಞಾನಸುದೀಪವನಿಟ್ಟು
ಮುತ್ತಿದ ಕತ್ತಲೆ ಮೊತ್ತವನಟ್ಟಿ
ಸುತ್ತುತ ಬರುತಿಹ ಗಾಳಿಯು ಕಟ್ಟಿ
ಬಂಧುರ ಸತ್ಯದ ಸ್ತಂಭವನೂರಿ
ಸುಂದರ ಭಕುತಿಯ ದಾರವ ತೂರಿ

ಅಷ್ಟಮದಂಗಳ ದಾರಿಯು ಮೀರಿ
ಆತ್ಮಾನಂದದ ಸೊಗವನು ತೋರಿ

ನಭದಲಿ ಬೆಳಗಲಿ ಚಿನ್ಮಯ ಕಿರಣ
ತುಂಬಲಿ ಪುಟ್ಟಯ್ಯನ ದೇವರ ಸ್ಮರಣ

ಆಗಲಿ ಜನನ ಮರಣದ ಹರಣ
ಇಂತೇರಿಸು ಶಿವಪುಟ್ಟಯ್ಯ ಜಾಣ''

ಸತ್ಯಭಿಕ್ಷುಕನಾಗಿ ಅಂದರೆ ಸಚ್ಛಿಷ್ಯನಾಗಿ ಶ್ರೀ ಗುರುವಿನಿಂದ ಪಡೆ ಕಾರುಣ್ಯಮಯ ಜ್ಞಾನಬೋಧೆಯನ್ನು ಬರೀ ಕಿವಿಯಲ್ಲಿ ಕೇಳಿ ಬಿಡಬಾರದು ಹೃದಯಕ್ಕೆ ಮುಟ್ಟಿಸಬೇಕು. ಆಲಿಸಿದುದನ್ನು ಪಾಲಿಸಬೇಕು. ಭಕ್ತನಾ ಬೇಕು. ಜ್ಞಾನಿಯಾಗಬೇಕು. ಸತ್ಯವಂತನಾಗಬೇಕು. ಅಷ್ಟಮದ ಪಂಚಪ್ರಾಣದ ಹಂಗಿಗನಾಗಬಾರದು. ಆತ್ಮಾನಂದದಲಿ ನಲಿಯಬೇಕು ಎತ್ತರದ ಬಾಳು ಬಾಳಬೇಕು ಬೆಳಗಬೇಕು. ಅದು ಆದರ್ಶ ಜೀವನ ಉಜ್ವಲ ಜೀವನ, ಅಚ್ಚಳಿಯದ ಜೀವನ ಅಂತಾದಾಗ ಗುರುಕರುಣೆ ಪಡೆದ ದಕ್ಕೆ ಸಾರ್ಥಕ ಎಂದು ಕವಿ ಹೇಳುತ್ತಾನೆ.

ಹೀಗೆ ಅಂಗವನ್ನು ಜ್ಯೋತಿರ್ಲಿಂಗಮಯವಾಗಿಸಿ ಹೃದಯಾಕಾಶದ ಹಾರುವಾಗ ಹಾಡುವಾಗ ಅಲ್ಲಿರುವ "ಯ ಎಷೋಂತರಾದಿತ್ಯೆ ಹಿರಣ್ಮಯ ಪುರುಷೋದೃಶ್ಯತೇ" ಹೊನ್ನು ಹಕ್ಕಿಯೊಂದು ಕಾಣಿಸಿಕೊಳ್ಳುತ್ತದೆ. ಅದಕ್ಕೆ ಹಣ್ಣುಗಳ ಆಸೆಯಿಲ್ಲ. ಹೆಸರಿಲ್ಲ ರೆಕ್ಕೆ ಇದ್ದದ್ದೂ ಇಲ್ಲ. ಆದರೂ ಹಾರುತಿದೆ. ಎಲ್ಲರಲ್ಲಿಯೂ ಇದೆ. ಆದರೆ ಅನೇಕರಿಗೆ ಅದಾವುದೆಂಬುದ ತಿಳಿಯದು. ತಿಳಿದವರು ತೀರ ವಿರಳ. ತಿಳಿದು ನಡೆದರೆ "ಅಮೃತಬಿಂದು" ಲಭ್ಯವಾಗುವುದು. ಅಮರತೆ ಪ್ರಾಪ್ತಿಯಾಗುವುದು. ಸರ್ವಜ್ಞತೆ ಕೈ ಸಾರು ವುದು ಆತ್ಮದ್ರಷ್ಟಾರ ನೆನಿಸುವನು. ಅವನೇ ಕಣ್ಣುಳ್ಳ ಕವಿ. ಅದೇ ಅವನು ಸೇರುವ ಮಾಮನೆ. ಅಲ್ಲಿ ನಿಂತು ಕವಿ ಅಮರಗಾನ ಮಾಡುವನು.

"ಎಲ್ಲಿ ಹೋದೆ ತಂದೆ" "ಮಟ್ಟಿ ಹೊಡೆವವಗೆ" "ಮೌನಂ ಸರ್ವಾರ್ಥ ಸಾದನಂ" "ಸಮರ್ಪಣ" "ಮಂಗಲಗೀತೆ" "ರಾಷ್ಟ್ರಪಿತನಿಗೆ" "ಪ್ರೋತ್ಸಾಹ"

“ಮಳೆಗಾಲ” “ಬಿಡುವನೇ” “ಶಿವಯೋಗಮಂದಿರ” “ನಾವಿಕನನ್ನು ಕುರಿತು” “ಸುಕುಮಾರನಿಗೆ” “ಶರ್ಮಸಮರ್ಪಣ” “ಪ್ರೇರಣೆಗೆ'' “ಬಡವ'' ''ವಿಜಯೋತ್ಸವ'' ''ಉತ್ತಿಷ್ಠತ''

ಕವಿ ಈ ಕವನಗಳನ್ನು ಕಟ್ಟಿ ಹಾಡಿದ್ದಾನೆ. ತನ್ನ ಕವಿತನದ ಲಕ್ಷಣಗಳನ್ನು ಸಾಧ್ಯವಾದಮಟ್ಟಿಗೂ ಇವುಗಳಲ್ಲಿ ಎತ್ತಿ ತೋರಿದ್ದಾನೆ ಅಲ್ಲದೆ ಕೆಳಗೆ ಕಾಣಿಸಿದ ಈ ಮಾತುಗಳು ಮನೋಹರವಾಗಿವೆ ಮಾರ್ಮಿಕವಾಗಿವೆ.

''ಉಷೆಯೊಳು ಇರುವುದು ಒಂದೇ ಕಣ್ಣು''
ನಿಶಿ ತಾ ಮುತ್ತಲು ಸಾವಿರ ಕಣ್ಣು
''ನಿಶೆಯು ಕಳೆದು ಉಷೆಯು ಬರಲಿ
ಹೃದಯ ಭಾವಿ ತೊಳೆದು ಮುಕ್ತನಾಗು ನೀ''
''ಇನ್ನು ಅಳಿಯಲಿ ಜಾತಿ ಭೇದವು”
ಮುನ್ನ ಬೆಳೆಯಲಿ ಒಂದೇ ಬಾವವು”
''ಸುಕುಮಾರನಿಲ್ಲದಿರೆ ಜನಕೆಲ್ಲ ಕಡು ದುಃಖ
ಸುಕುಮಾರ ಮನೆಗೆಲ್ಲ ಸುಖಸಾರ ಸಂಭಾರ''

—ಇತ್ಯಾದಿ

ಕನ್ನಡಿಗನಾದಗೂ ಕವಿ ಹೃದಯ ಭಾರತದ ವಿಜಯಕ್ಕೆ ಮಿಡಿದಿದೆ. ಭಾವ ವಿಶಾಲತೆಯ ಬೀರಿದೆ. ಭಾಷಾಮಯಿಯಾಗಿ ಹೊಮ್ಮಿದೆ.

''ವಿಜಯವಾಗಲಿ ನಮ್ಮ ಭಾರತನಾಡು
ಸುಜನ ಸಂಕುಲವನ್ನು ಪೆತ್ತು ಮೆರದಿಹನಾಡು

ಎನ್ನುತ್ತಾನೆ ಕವಿ. ಭಾರತ ಪ್ರೇಮವನ್ನು ಉಗ್ಗಡಿಸಿದ್ದಾನೆ. ಭಾರತಕ್ಕಾದ ವಿಜಯವನ್ನು ಕಂಡು ಕವಿ ಉಲ್ಲಾಸ–ಉತ್ಸಾಹಗಳಿಂದ ಉಬ್ಬಿದ್ದಾನೆ.

''ವೀರರಾತ್ಮಗಳಿಂದು ತೃಪ್ತಿ ಹೊಂದುವ ದಿನವು
ಭಾರತೀಯರ ಕೈಗೆ ರಾಜ್ಯ ದೊರೆಯುವ ದಿನವು
ವೀರತನವನು ಪೊಂದಿ ದೇಶವಾಳುವ ದಿನವು
ಭಾರತೀಯರೇ ಬನ್ನಿ ಹರುಷದಲಿ ಮುಂದಿನ್ನು''
''ವೀರರಹ ಧೀರರಹ ನಿನ್ನ ಮಕ್ಕಳಿಗಿನ್ನು
ಭೂರಿ ಸಂತಸದಿಂದ ಕರುಣಿಸೌ ಓ ತಾಯೆ”

ಕವಿ ಹರುಷದಲಿ ತೇಲಿ ವಿಜಯ ತಂದ ದಿನವನ್ನು ವಿವಿಧವಾಗಿ ವರ್ಣ
ತುಂಬಿದ ಎದೆಯಿಂದ ಆರ್ತ ಭಾರತೀಯರನ್ನು ಆಹ್ವಾನಿಸಿದ್ದಾನೆ. ಇ
ಭಾರತಾಂಬೆಯನ್ನು ಕರುಣಿಸೆಂದು ಕರುಳಿನಿಂದ ಕೋರುತ್ತಾನೆ.

ಗೋಡ್ಸೆ ಗುಂಡಿಗೆ ಆಹುತಿಯಾಗಿ ಕಣ್ಮರೆಯಾದ ಗಾಂಧೀಜಿಯನ
ಕಂಡು ಕವಿ ಹೃದಯ ತಲ್ಲಣಿಸಿದೆ.

> "ಮುಳುಗಿದನು ಮುಳುಗಿದನು ಭಾರತದ ಚಿತ್ಸೂರ್ಯ
> ಮುಳುಗಿದನು ಮುಳುಗಿದನು ಸತ್ಯಕಿರಣದ ಸೂರ್ಯ"

ಕವಿಯ ಈ ಬಾಷ್ಪಾಂಜಲಿಯಲ್ಲಿಯೂ ಇಡಿದಾದ ಭಾರತದ ಮುಂದಿ
ಚಿಂತೆ; ಮುಸುಗಿ ಮುತ್ತಿ ಬರುವ ಕಾಳ್ಗತ್ತಲೆಯ ಕಳೆವ ಚಿಂತೆ, ಅವರ
ದಾರಿ ತೋರುವರಾರೆಂಬ ಚಿಂತೆ ತುಂಬಿ ಬಂದಿದೆ. ಜ್ಞಾನ ಮತ್ತು ಸತ್ಯಗ
ಹಂಬಲ ಹೊಮ್ಮಿದೆ. ಭಾರತದ ರೂಪದಲ್ಲಿ ಮಹಾತ್ಮರ ಸೇವೆ ಸಲ್ಲಿಸು
ರುವವರು ಬಹುಮಂದಿ ಸ್ವಾರ್ಥಕ್ಕೆ ಸಿಕ್ಕಿ ಸತ್ಯದ ನಿಗ್ರಹ ಮಾಡುತ್ತಿದ್ದಾ
ಅಹಂಕಾರಕ್ಕೆ ಸಿಕ್ಕಿ ಅರುವಿನ ದುರುಪಯೋಗ ನಡೆಸಿದ್ದಾರೆ. ಹೀಗಾಗು
ದನ್ನು ಅಂದೆ ಕಂಡು ಕವಿ ಮಮ್ಮಲನೆ ಮರುಗಿದ್ದಾನೆ. ಆ ಚಿತ್ಸೂರ್ಯ
ಮುಳುಗಿದ ಮೇಲೆ ನಡೆಯುತ್ತಿರುವ ಇಂದಿನ ಭಾರತದ ಭೀಕರ ಚಿತ್ರವಿದ

> "ಸ್ವಾತಂತ್ರ್ಯ ದೊರೆತರೂ ನಡೆದಿಹುದು ಸುತ್ತೆಲ್ಲ
> ಕಳ್ಳ ಸುಲಿಗೆಗಳಾ ಬಡಿದಾಟ ಕೊಲೆಯಾಟ
> ಅನ್ನ ನೀರಿಲ್ಲದಲೆ ಮರಗುತ್ತ ಕೊರಗುತ್ತ
> ಸಾಯುವಾ ಜನಸಂಖ್ಯೆ ಹೆಚ್ಚುತ್ತಲಿರುವದದ್ದೆ"

ಸ್ವಾರ್ಥ, ಅಸತ್ಯ, ಅಜ್ಞಾನ, ಆಹಾರದ ಅಭಾವ ಈ ವಿಪತ್ತಿಗೆ ಮೂ
ಬೀಜವೆಂದು ಕವಿಯು ಹೇಳುತ್ತಾನೆ. ತೃಪ್ತಿಯಿಲ್ಲದ ತ್ಯಾಗವಿಲ್ಲ
ಸ್ವಾತಂತ್ರ್ಯ ಸತ್ಯಕ್ಕೂ ಕೊರತೆಯದೆಂದು ನುಡಿಯುತ್ತಾನೆ. ಕೊನೆ
ಸ್ವಾತಂತ್ರ್ಯ ಆತ್ಮಶಕ್ತಿಗೆ ಸಾಧನವಾಗಲೆಂದು ಹೃದಯಾರೆ ಹರಸುತ್ತಾನೆ.

ಆತ್ಮಸಾಧನೆಯ ಮಾಡಿ ಆತ್ಮವೀರರಾಗಿ ಬಾಳಬೇಕೆಂಬುದು ಕವಿಯ
ಉತ್ಕಟ ಮನೀಷೆ ! ಅದಕ್ಕಾಗಿ ಕವಿಯು ಕಲ್ಮಷರಹಿತ ಹೃದಯವಾಣಿ ಉ
ಹರಿದಿದೆ. 'ಉತ್ತಿಷ್ಠತ' ಎಂಬ ಕವನರೂಪದಲ್ಲಿ ಉಗ್ಗಡಿಸುತ್ತಾನೆ. ಅ

ರಲ್ಲಿ ಎಲ್ಲರನ್ನೂ ಪ್ರಚೋದಿಸುವ ಪ್ರಚೋಲಹರಿ ಇದೆ, ವಿಚಾರಸರಣಿಯಿದೆ. “ಶುಭಸ್ಯ ಶೀಘ್ರಂ” ಎಂಬ ನಾಣ್ಣುಡಿಯ ಆತುರತೆಯಿದೆ. ಹೂವುಗಳಂತೆ ಹೃದಯಗಳು ಅರಳಬೇಕೆನ್ನುತ್ತಾನೆ. ಹಕ್ಕಿಗಳಂತೆ ಹಾರಬೇಕೆನ್ನುತ್ತಾನೆ. ಭಾಸ್ಕರನ ಬೆಳಕಿನಂತೆ ಬುದ್ಧಿಯ ಬೆಳಕು ಹಬ್ಬಬೇಕೆನ್ನುತ್ತಾನೆ. ಮದವನ್ನು ಮುರಿದು; ತೊಳಲಿಕೆಯನ್ನು ತರಿದು ಗುರಿಯನ್ನು ಗುರುತಿಸಬೇಕೆನ್ನುತ್ತಾನೆ. ಆ ಗುರಿಯ ಸಾಧನೆಗೆ ಹೊರತಾದುದನ್ನ ಕವಿ ಸಹಿಸ :

“ಜರಿಯೋಣ ಜನದಿಂದ ಸಂಸಾರ ಜಂಜಾಟ
ಮನಸಿನ ಶಾಂತಿಯನು ಕಳದೇಕೆ ಹೋಸೋಟ
ರತ್ನವನು ಹುಡುಕುವುದು ಬಿಟ್ಟೇಕೆ ಅಲೆದಾಟ
ಆಡೋಣ ಶಕ್ತಿಯನುಗಳಿಸಲ್ಕೆ ಶಿವನಾಟ !
ಪ್ರಕೃತಿ ರಂಗದಿ ಬಾಳಿ ಸಂಪತ್ತು ನಳಿಸೋಣ
ಪ್ರಾಕೃತಿಕ ಭಾವದೊಳು ಸತ್ಯತೆಯ ಕಾಣೋಣ
ಶಕ್ತಿ ತಾನಿಲ್ಲೆಂದು ಕೂಡ್ರುವುದು ಹಿತವಲ್ಲ
ಸೋಲು ತಾ ಬರುತಿರೆ ಹೆದರುವುದು ವಿಹಿತವಲ್ಲ.
ದುಡಿಮೆಯು ಮಾನವನ ಬಾಳಿಗಿದು ಹಿರಿಬೆಳಕು
ದುಡಿದಂತೆ ದೂರಹುದು ಮುತ್ತಿರುವ ಮನಕೊಳಕು
ದುಡಿಯಲಾರದ ವ್ಯಕ್ತಿ ಬಿದ್ದಿರುವ ಹೆಣದಂತೆ
ದುಡಿವವನ ದಿಟಬಾಳು ಕನಕದರ್ಪಣದಂತೆ
ಎದ್ದೇಳಿ ನಡೆಯೋಣ ಭಕ್ತಿ ಭಿಕ್ಷವ ಬೇಡಿ
ಸಿದ್ಧರಿರಿ ನೀವೆಲ್ಲ ವಿರತಿ ಗಂಧವ ತೀಡಿ”

ಕವಿ ಆ ಆತ್ಮಸಾಧನೆಗೆ ಆಹ್ವಾನ ಕೊಡುತ್ತಿದ್ದರೂ ಎಚ್ಚರಿಕೆ ಹೇಳುತ್ತಿದ್ದರೂ ಭೌತಿಕದ ಬಾಳನ್ನು ಗಾಳಿಗೆ ತೂರಿಲ್ಲ. ಇಹದ ಅಭ್ಯುದಯದ ಮೇಲೂ ಕಣ್ಣಿದೆ. ಈ ಲೋಕದ ಸುಖಸಂಪತ್ತುಗಳು ಪುಣ್ಯದ ಫಲವೆಂದು ವಿಧಿಬಲವೆಂದು ಹುರುಳಿಲ್ಲದ ಹೇಡಿ ನುಡಿಗಳ ನಾಡಿಲ್ಲ ದುಡಿಮೆ ಬೇಕೆಂದು ಎಲ್ಲರೂ ದುಡಿಯಬೇಕೆಂದು ಕವಿವಾಣಿಯಲ್ಲಿ ಕರುಳರಿವಂತೆ ಹೇಳುತ್ತಾನೆ. ಸೋಲಿನಲ್ಲಿಯೂ ಸಹ ಜೋಲು ಬೀಳಬಾರದೆಂದು ಕವಿ ಮೇಲಿಂದ ಮೇಲೆ ಹೇಳುತ್ತಾನೆ. ಕವಿಯ ಸ್ಥೈರ್ಯ ಗುಣಕ್ಕೆ ಸಾಹಸ ಪ್ರಿಯತೆಗೆ ಇದು ಕುರುಹು. ಭಕ್ತಿರಸದೂಟಕ್ಕೆ ಎದ್ದೇಳಿ ಎನ್ನುತ್ತಾನೆ ಕವಿ. ತ್ಯಾಗಗಂಧವ ತೀಡಲು

ಮರೆಯದಿರೆಂದು ಎಚ್ಚರವೀಯುತ್ತಾನೆ. ಪಥಿಕನ ಗುರಿ ಭಕ್ತಿಯಲ್ಲಿ ಜ್ಞಾ
ದಲ್ಲಿ ತ್ಯಾಗದಲ್ಲಿ ! ತನ್ನಂತೆ ಎಲ್ಲರೂ ಆ ದಾರಿಕಾರರಾಗಬೇಕೆಂಬ ವಿಶಾ
ದೃಷ್ಟಿ ಕವಿಗಿದೆ. ಸತ್ಯದೃಷ್ಟಿಕರ್ತನಾಗುವ ತೀವ್ರಾಸಕ್ತಿಯಿದೆ.

ಈ ಪಥಿಕನಿಗೆ "ಪಥಿಕ" ಕವನದಲ್ಲಿ ಹೇಳಿದಂತೆ ಯಾವ ಸಾಧ
ಸಂಪತ್ತಿ ಇಲ್ಲದಿದ್ದರೂ ಅಂಗಸೌಷ್ಠವದ ಅಭಾವವಿದ್ದರೂ ತನ್ನ ಅಂತ
ಪ್ರೇರಣೆಯಮೇಲೆ ಅಪಾರ ವಿಶ್ವಾಸವಿದೆ.

"ನಡೆಮುಂದೆ ಎನ್ನುತ್ತ ದೂಡೆನ್ನ ಪ್ರೇರಣೆಯೆ
ಆತ್ಮರಾಜ್ಯದೊಳಾನರಸಾಗಿ ಬಾಳ್ವಂತೆ!"

ಆತನ ಆ ಅಂತಃಪ್ರೇರಣೆಯು, ಆತನನ್ನು ಬರೀ "ನಡೆಮುಂದೆ" ಎಂದ
ನುಡಿದರೆ ಸಾಲದು, ಕೈಯಿಂದ ದೂಡಬೇಕಂತೆ! ಅದೇನು ಆತುರತೆ
ಅದೆಂತಹ ಉತ್ಕಟತೆ? ಆತ್ಮರಾಜ್ಯದ ಅರಸಾಗಿ ಬಾಳುವ ಹೊಂಗನಸ
ಪಥಿಕನದು. ತನಗೆ ಆ ರಾಜಬೀದಿಯನ್ನು ತೋರುವುದು ತನ್ನ ಪ್ರೇರಣೆ
ತನ್ನ ಆ ಪ್ರೇರಣೆಯಲ್ಲಿ ಅಂತಹ ಶಕ್ತಿಯಿಲ್ಲದಿಲ್ಲ 'ಪ್ರೇರಣೆಯೇ ಧಾರ
ಣೆಗೆ ಜೀತನ ಕೊಡುತಿಹುದು'. ಒಬ್ಬ ವ್ಯಕ್ತಿಗೆ ಕೊಡದಿದ್ದೀತೆ ? ಕವಿಯ
ಕಣ್ಣು ಪ್ರೇರಣೆಯ ಬೆನ್ನು ಬಿದ್ದಿದೆ. ತಬ್ಬಲು ತವಕಗೊಂಡಿದೆ.

ಪ್ರೇರಣೆ ಪ್ರತಿಯೊಬ್ಬರಿಗೂ ಬೇಕು. ಅದಿಲ್ಲದ ಜೀವನ ಜೀವನವಲ್ಲ
ಅಲ್ಲಿ ವಿಕಾಸವಿಲ್ಲ, ಪ್ರಕಾಶವಿಲ್ಲ, ಪೆಂಪಿಲ್ಲ, ಕಂಪಿಲ್ಲ.

"ಪ್ರೇರಣೆಯು ಬಲವಿರದ ಆ ಜೀವ ಆ ಭಾವ
ದಿನಕರನು ತಾನಿರದ ನೀರಜದ ತೆರದಂತೆ
ಪ್ರೇರಣೆಯು ತುಂಬಿರುವ ಹೃದಯುವದು ಕಾಣಿಪುದು
ಸ್ವರ್ಣಘಟದಂತೆ ಮೇಣ್ ಸೌಗಂಧ್ಯದಲರದಂತೆ!"

ಕವಿಯದು ಈ ಭಾವ. ಸತ್ಪ್ರೇರಣೆಯಿಲ್ಲದವನು ಬೆಳಕಿಗೆ ಬಾರನೆಂಬುದ
ಸಾವಿರಪಾಲಿಗೂ ಸತ್ಯ. ಕವಿಗೆ ಪ್ರೇರಣೆಯ ಬಲವೇ ಬಲ. ಆ ಚಲುವೆ
ಚಲುವು. ಅದರಿಂದ ಆತನ ಶೈಲಿಯಲ್ಲಿ ಪ್ರಾಸಿನ ಮಾಟವನ್ನು ಬೆದ
ಬೇಕಾಗಿಲ್ಲ. ಆತನ ಭಾವಪ್ರೇರಣೆಯ ಓಟವನ್ನು ನೋಡಿ ನಲಿಯಬೇಕು
ಹೃದಯುರಸದೂಟವನ್ನು ಉಂಡು ಒಲಿಯಬೇಕು.

"ಬಡತನದ ಬೇಗೆಯಲಿ
ಬೆಂದಿಹುದು ಬಾಳೆಂದು
ಅಳಲದಿರು ಬಳಲದಿರು
ಬಳಲಿ ನೀ ಚಿಂತಿಸದಿರು"

ಎಂದು ಮನಸ್ಸಿಗೆ ಬೋಧಿಸುತ್ತಾನೆ. ಕಾಲಿದಾಸ, ಮಾಘ, ಷಾ. ಷೆಲ್ಲಿ ಕವಿಗಳು ಬಡವರಾದರೂ ಕಾವ್ಯರಾಜ್ಯ ಕಟ್ಟಲಿಲ್ಲವೆ? ಉಳಿಸಿ ಬೆಳೆಸಲಿಲ್ಲವೇ? ಚಿರಕೀರ್ತಿ, ಚಿರಶಾಂತಿ ಗಳಿಸಲಿಲ್ಲವೆ? ಎಂದೆನ್ನುತ್ತಾನೆ. 'ಬಡವಾದ ರೇನಂತೆ ಸಾಹಿತ್ಯ ಬೆಳಸಲ್ಕೆ ಎಂಬುದು ಕವಿಯ ಭಾವ; ಕಲಾಭಿಮಾನ. ಈ ಸಂಪತ್ತು ನಶ್ವರ; ಸಾಹಿತ್ಯ ಸಂಪತ್ತು ಶಾಸ್ವತ. ಕಾಣುವ ರಾಜ್ಯ ಅಸ್ಥಿರ, ಕಾವ್ಯರಾಜ್ಯ ಸುಸ್ಥಿರ. ಆದ್ದರಿಂದ ಕವಿ ಬಡವನಲ್ಲ. ಕಾವ್ಯರಾಜ್ಯ ವಿದೆ. ಸಾಹಿತ್ಯ ಸಂಪತ್ತಿದೆ-ಸಾಲದೆ? ಎಂದು ಮನಸ್ಸಿಗೆ ಸಮಾಧಾನ ಹೇಳುತ್ತಾನೆ. ಕಾವ್ಯತೀರ್ಥ – ಸಾಹಿತ್ಯ ರತ್ನನಾದ ಕವಿಗೂ ಅದರಲ್ಲಿ "ಪುರಸ್ಕಾರ"ವಿದೆ. ಅದರಿಂದ ಭಾರತದ ಕವಿಯಿತ್ರಿ ಶ್ರೀಮತಿ ಸರೋಜಿನಿ ನಾಯಿಡು ಅವರ " ಪುರಸ್ಕಾರ " ಕವನಕ್ಕೆ ಕವಿಯ ಭಾವ ಬಳುಕಿದೆ. ಭಾವಾನುವಾದವನ್ನು ನೆರವೇರಿಸಿದೆ. ಪುರಸ್ಕಾರವಿತ್ತಿದೆ. ಕವಿವಾಣಿ ಹೀಗೆ ಹಂಬಲಿಸಿದೆ.

"ಸ್ರೋತವಗೆ ಮಾನಸಿಕ
ಶಾಂತಿಯನು ಕರುಣಿಸೈ
ಓ ನನ್ನ ಗುರುದೇವ
ಕೃಪೆಮಾಡು ನೀನೆನಗೆ
ಕವಿತೆಯಾ ಶಕ್ತಿಯದು
ಬೆಳೆವಂತೆ ಲತೆಯಂತೆ ? "

ಎಂದು ಕವಿ ಪ್ರಾರ್ಥಿಸುತ್ತಾನೆ. ಕಾವ್ಯಶಕ್ತಿಯನ್ನು ಅರ್ಥಿಸುತ್ತಾನೆ. ತನಗೆ ಕಾವ್ಯಶಕ್ತಿ ಸುಳಿಯಿಡುವ ಗಾಳಿಗೆ ಬಳಕುವ ಲತೆಯಂತೆ ಬೆಳೆದು ಬರ ಬೇಕಂತೆ! ಸ್ರೋತವನ ಎದೆಗೆ ಶಾಂತಿಯನು ಕೊಡುವಂತೆ ಕರುಣಿಸಬೇಕಂತೆ!!

ಲತೆಯ ಉಪಮೆಯಿಂದ ಕವಿಗೆ ಕಾವ್ಯಶಕ್ತಿ ಬಂದರೂ ಕಾಠಿಣ್ಯ. ಹಠಭಾವ ಬೇಡವೆಂಬುದನ್ನು ಬಳ್ಳಿಯಂತೆ ಬಾಗುವ ವಿನಯ ಗುಣ ಬೇಕೆಂಬುದನ್ನು ಅರಿಯಬಹುದಲ್ಲವೆ ?

ಸಂಭವಿಸಿದ ಆ ಕಾವ್ಯಶಕ್ತಿಯಿಂದ ಪಥಿಕನಾದ ತಾನು ನೀರಲ್ಲಿ ನೆ
ದಲ್ಲಿ ಗಾಳಿಯಲ್ಲಿ ಬೆಂಕಿಯಲ್ಲಿ ಶೈಲ ಶಿಖರದಲ್ಲಿ ಲೀಲಾಜಾಲವಾಗಿ ಹೋ
ಬಲ್ಲನಂತೆ ! ಚಂದ್ರನಂತೆ ತಂಪಾಗಿ ಸೂರ್ಯನಂತೆ ತೇಜಸ್ವಿಯಾಗಿ ಸಲಿ
ವಂತೆ ಸರಸನಾಗಿ ಮೆರೆಯಲಾಸೆಯಂತೆ ! ಕವಿಗೆ ಬಾಸ್ ಬಲುಕಿರಿದಂತೆ
ಬನಮಿಗಿಲಂತೆ; ಚಲುವಂತೆ ! ಮೂಲೋಕದ ತುಂಬ ಮನೆಗಳಂತೆ
ಅಲ್ಲದೆ,

"ಅಳಿವುದೊಮ್ಮೆ ಬ್ರಹ್ಮಸೃಷ್ಟಿ
ಉಳಿವುದಂತ್ಯ ಕವಿಯುಸೃಷ್ಟಿ"

ಆದರಿಂದ ಈ ಪಥಿಕನಿಗೆ ಕವಿಯಾಗುವ ಕೆಚ್ಚು-ಮೆಚ್ಚು; ಸಾಹಸಹೆಚ್ಚು

ಈ ಕವಿಯ ಸಾಹಸ ಕೈ ಗೂಡಿ ಬರುವ ಆಶೆಯಿದೆ. ಕವಿ ತ
ಸಾಧನೆಯನ್ನು ಮನಮುಟ್ಟಿ ಮಾಡಿದ್ದಾನೆ. ಶಿವಯೋಗ ಮಂದಿರದ
ಓದುವಾಗ ಕಾಲವನ್ನು ವೃಥಾ ಕಳೆದಿಲ್ಲ. ಅಲ್ಲಿಗೆ ತಾನುಬಂದ ಧ್ಯೇಯ
ನೆಂಬುದನ್ನು ಚನ್ನಾಗಿ ಅರಿತು ತನ್ನ ಸಾಧನೆಯಲ್ಲಿ ನುರಿತಿದ್ದಾನೆ. ತ
ಬುದ್ಧಿಯನ್ನು ಚಿತ್ತರಿಸಿದ್ದಾನೆ. ತನ್ನ ಜ್ಞಾನನ್ನು ಎತ್ತರಿಸಿದ್ದಾನೆ. ಆ
ಆಳಮಾತ್ರ ಇನ್ನೂ ಹೆಚ್ಚಿಸಬೇಕು. ಶಬ್ದ ಸಂಪತ್ತು ಅಭಿವೃದ್ಧಿ ಯಾ
ಬೇಕು. ಶೈಲಿಯಲ್ಲಿ ಬಿಗುವು ಬರಬೇಕು.

ಶಿವಯೋಗ ಮಂದಿರದ ಸಾಧಕ ವೃಂದಕ್ಕೆಲ್ಲ ಶ್ರೀ ಮಹಾಂತದೇವ
ಒಬ್ಬ ಮಹಾ ಆದರ್ಶಸಾಧಕ ಕೃತಕ ಬಾಳಿಗೆ ಸ್ಥಳವನ್ನು ಕೊಡ
ಕೃತಾರ್ಥ ಜೀವನ ಪಥದಲ್ಲಿ "ಪಥಿಕ"ರಾಗಿ ಮುನ್ನಡೆದಿದ್ದಾರೆ. ಸರ್ವರಿಗ
ಸಾಧ್ಯವಾಗದ ಸಾಹಿತ್ಯಾಭಿರುಚಿಯನ್ನು ಸುಲಭವಾಗಿ ಬೆಳಸಿಕೊಂಡಿದ್ದಾ
ನೂತನ ಮಾನವೀಯತೆಯ ಉನ್ನತಮಟ್ಟವನ್ನು ಮನವರಿಗೆ ಮಾ
ಕೊಂಡಿದ್ದಾರೆ. ವಿರತಿ ಜೀವನವನ್ನು ಸಾಹಿತ್ಯ ಸಾಂಸ್ಕೃತಿಕ ಸೇವೆಯಿಂ
ಸಾರ್ಥಕ ಪಡಿಸುವ ವಿಶೇಷ ರತಿಯನ್ನು ತಾಳಿದ್ದಾರೆ. ವಿರತಿಗೆ ಈ
ಶೋಭಾಯಮಾನವಲ್ಲವೇ? ಈ ಪ್ರೇರಣೆ ಈ ಪ್ರಯೋಗ ಧೋರಣೆ ಪ್ರ
ಯೊಬ್ಬ ಸಾಧಕನಿಗೂ ಮನಸಿನಮೇಲೆ ಮೂಡಿಬರಬೇಕು. ಇವ
ಹಿರಿಯರಲ್ಲಿಯೂ ಕಾಣುವದು ಕಷ್ಟಸಾಧ್ಯವಾಗಿದೆ.

ಬೌದ್ಧಿಕ ಮತ್ತು ಆಧ್ಯಾತ್ಮಿಕ ವಿಕಾಸವು ಇಂದಿನ ವಿಜ್ಞಾನ ಯುಗ ದಲ್ಲಿ ಅತ್ಯಾವಶ್ಯಕ! ಅದಕ್ಕಾಗಿಯೇ ಮೀಸಲಾಗಿ ಸಂಸಾರವನ್ನು ತ್ಯಜಿಸಿ ಬಂದವರಿಗಂತೂ ಮತ್ತು ಆವಶ್ಯಕ. ಇಂದು ವಿಜ್ಞಾನದ ವಿಸ್ತಾರ ದಿನ ದಿನಕ್ಕೂ ಗಳಿಗೆ ಗಳಿಗೆಗೂ ವಿಶೇಷವಾಗಿ ಸಾಗುತ್ತಿರುವಾಗ ನಮ್ಮ ಬುದ್ಧಿ ವಿಕಾಸವಾಗಬೇಡವೆ? ಅಶಾಂತಿ ಅನೈಕ್ಯತೆ ತಾಂಡವವಾಡುತ್ತಿರುವಾಗ ಆತ್ಮ ಶಕ್ತಿ ಆತ್ಮೀಯ ಶಕ್ತಿಗಳನ್ನು ಮೈಗೂಡಿಸಿಕೊಳ್ಳಬೇಡವೆ? ಮಹಾತ್ಮ ನಾಗುವ ಮಾನವಶಕ್ತಿಯ ಅಪವ್ಯಯವಾಗಬಾರದು ಕಾವ್ಯಸಿದ್ಧಿಗಿರುವ ಬುದ್ಧಿಶಕ್ತಿಯು ವಂಚನೆಯಾಗಬಾರದು. ಕಲಿತ ವಿದ್ಯೆಯ ಉಪಯೋಗ ವಾಗಬೇಕು. ಒಲಿತ ತಪಸ್ಸಿನ ಪ್ರಯೋಗವಾಗಬೇಕು ಎಂಬುದನ್ನು ಮಹಾಂತದೇವರು ಮನಸಾರೆ ಒಪ್ಪಿ ಆ ಮಾರ್ಗವನ್ನು ಅಪ್ಪಿಕೊಂಡಿದ್ದಾರೆ. "ಪಥಿಕ" ರೂಪದಲ್ಲಿ ಪ್ರಯೋಗ ನಡೆಸಿದ್ದಾರೆ. ಫಲಿತಾಂಶಕ್ಕಾಗಿ ಚಾತಕ ಪಕ್ಷಿಯಂತೆ ಪ್ರಾರ್ಥನೆಯ ಮಾಡಿದ್ದಾರೆ.

ಈ "ಪಥಿಕ" ಕಾವ್ಯವು 'ಪ್ರಾರ್ಥನೆ'ಯಲ್ಲಿ ಪರ್ಯವಸಾನವಾಗು ತ್ತದೆ. ಪಥಿಕನ ಪಾತ್ರ ಪ್ರಾರ್ಥನೆಯಲ್ಲಿಯೂ ಮೂಡಿಬಂದು ತನ್ನ ಗುರಿ ಯನ್ನು ನಾವು ಮೊದಲು ಹೇಳಿರುವಂತೆ ತನ್ನ ಏಕಸೂತ್ರತೆಯನ್ನು ಚನ್ನಾಗಿ ಕಾಪಾಡಿಕೊಂಡಿದೆ.

ಪಥಿಕನು ಪ್ರಯತ್ನಪಟ್ಟು ತಾನು ಸೇರಲಿರುವ ಮಂದಿರದ ಬಾಗಿಲ ಬಳಿ ಬಂದಿದ್ದಾನೆ. ಇನ್ನು ಒಳ ಹೋಗಲಾರನೆ? ಇಲ್ಲಿಗೆ ಬಂದ ಈ ಪಥಿ ಕನಿಗೆ ಕಾಲಿಲ್ಲದಿದ್ದರೂ ಒಲವೇ ಕಾಲಾಯಿತು. ಕಣ್ಣಿಲ್ಲದಿದ್ದರೂ ಅರಿವೇ ಕಣ್ಣಾಯಿತು. ಜ್ಞಾನಭಿಕ್ಷುವಾದ ಈ ಪಥಿಕನಿಗೆ ಜ್ಞಾನವೇ ಬೆಳಕು, ಭಾಗ್ಯ, ನೌಕೆ, ವಜ್ರಗಳಾಗಿ ಸರ್ವಸ್ವವಾಗಿ ಪರಿಣಮಿಸಿತು. ಆ ಜ್ಞಾನ ತೇಜಸ್ಸಿನ ಮುಂದೆ ಈ ಕಾಳರಾತ್ರಿ ನಿಲ್ಲಲಿಲ್ಲ- ಆ ಜ್ಞಾನ ಸಂಪದದ ಮುಂದೆ ಈ ಹೀನ ಧನದ ಬಡತನ ಕಾಣಲಿಲ್ಲ. ಅಜ್ಞಾನ ನೌಕೆಗೆ ಈ ಮೋಹದ ತೊರೆ–ಕೆರೆಗಳು ಅಡ್ಡಾಗಲಿಲ್ಲ. ಆ ಜ್ಞಾನ ವಜ್ರಕ್ಕೆ ಈ ಅಜ್ಞಾನ ಗಿರಿ ಶಿಖರಗಳು ಪುಡಿಯಾಗದೆ ಉಳಿಯಲಿಲ್ಲ. ಪಥಿಕ ಅದರ ಬಲದಿಂದ ಹಾಯಾಗಿ ಹಾದಿ ನಡೆದುಬಂದಿದ್ದಾನೆ. ತಾಪಗಳನ್ನು ತುಳಿದು ಬಂದಿ

ದ್ದಾನೆ. ತಮಸ್ಸನ್ನು ತೊಡೆದು ಬಂದಿದ್ದಾನೆ. ಆದರೂ "ಬಲವಾ
ಇಂದ್ರಿಯ ಗ್ರಾಮೋ ವಿದ್ವಾಂಸಮಪಿ ಕರ್ಷತಿ" ಎಂಬುದು ಸತ್ಯ, ಮತ
ಜ್ಞಾನಪಿಪಾಸು ತನ್ನ ಸಾಧನೆಯ ಜೀವನದಲ್ಲಿ ಅನೇಕ ಕಷ್ಟ-ಕೋ
ಗಳನ್ನು ಎದುರಿಸಿ ಮುನ್ನಡೆಯಬೇಕಾಗುತ್ತದೆ. ಅಲ್ಲದೆ "ಶ್ರೇಯಾಂ
ಬಹು ವಿಘ್ನಾನಿ" ಎಂಬುದನ್ನು ಎತ್ತಿ ಹೇಳಲು ಕವಿ ಪ್ರಾರ್ಥನೆಗೆ ಪ್ರಾರಂಭ
ತನಗುಂಟಾದ ನೋವು ಸಾವುಗಳನ್ನು ಕಷ್ಟ ಕಾರ್ಪಣ್ಯಗಳನ್ನು
ಪರಿಯಾಗಿ ತೋಡಿಕೊಂಡು ಕಡೆಗೆ–

"ಬಲ್ಗಿಚ್ಚು ತಿರಸಂತೆ ಕಾಯ್ದಿರುವ ನೆಲವನ್ನು
ತುಳಿಯುತ್ತ ಕೊಳಲುತ್ತ ನಿನ್ನ ಬಳಿ ಬಂದಿಹೆನು
ಮನೆಯೊಳಗೆ ಕುಳಿತಿರುವ ಅಂತರತಮ ಗುರುದೇವ
ಕಣ್ದೆರೆದು ನೋಡಯ್ಯ ಕರುಣೆಯನು ನೀಡಯ್ಯ
ಬಾಯ್ದೆರೆದು ಬಟ್ಟಲವ ಹಿಡಿದು ನಾ ನಿಂತಿರುವೆ
ಕವಿನೀರನಿತ್ತೆನಗೆ ಮನೆಯೊಳಗೆ ಕರೆದುಕೋ"

ಸಾಧನೆಯ ಮಾರ್ಗ ಉರಿಗಿಚ್ಚು. ಅದನ್ನು ದಾಟಲುಬೇಕು ಹಿರಿದ
ಕಿಚ್ಚು, ಮಹಾಂತಕವಿ ದಾಟಿ ಬಂದಿದ್ದಾನೆ. ಆರ್ತ ಹೃದಯನಾಗಿ ಅ
ಲಾಚಿದ್ದಾನೆ. ನಡೆದುಬಂದವರ ಕಷ್ಟವನ್ನು ಕಡೆಯುದವರೆತ್ತ ಬಲ್ಲ
ಕಠಿಣಾತ್ಮರಿಗಂತೂ ಕಾಣುವುದೇ ಇಲ್ಲ. ಕರುಣಾಳುವಾದ ಗುರುದೆ
ಮಾತ್ರ ಕಾಣುವನು. ಆದರಿಂದ ಗುರುದೇವನಲ್ಲಿ ಮನಕರಗುವ
ಮೊರೆಯಿಟ್ಟಿದ್ದಾನೆ. ಕವಿ ತನ್ನ ಬುದ್ಧಿಯೆಂಬ ಬಾಯ್ದೆರೆದ ಶಬ್ದವೆ
ಬಟ್ಟಲ ಹಿಡಿದು ರಸಾಮೃತವನೀಡೆಂದು ಬೇಡುತ್ತಾನೆ. ಆ ಕಾವ್ಯರ
ನುಂಡು ಕವಿಯಾಗಲು ಕಾಂಕ್ಷಿಸುತ್ತಾನೆ. ಆಗುವ ಮುನ್ಸೂಚನೆಯ
ಈ ಕವನ ಸಂಗ್ರಹ ಸಾರಿದೆ. ಶ್ರೀ ಮಹಾಂತದೇವರು ಮಹಾಕವಿ
ಗುವ ಮಹಾಂತಕೀರ್ತಿ ಕಾಯ್ದಿದೆ. ಅವರ ಪ್ರಾಣವಾಯು ಅದೇ ಸಂ
ವನ್ನು ಹೊತ್ತು ತಂದು ಉಸುರುತಿದೆ. ಈ ಬಾಲಕವಿಗೆ ನಿಜವಾಗಿ
ಆ ದೃತಿಯಿದೆ, ದ್ಯುತಿಯಿದೆ. ಶಬ್ದ ಸಂಪತ್ತಿಯ ಸಹಾಯವೊದಗಿ
ಸಾಕು.

ಕವಿಯ ಹೃದಯ ಹರಕೆ ಕೈಗೂಡಲಿ. ಕಾವ್ಯರಸದೂಟವನ್ನು ಕನ್ನಡಿಗರಿಗೆ ಇನ್ನೂ ರುಚಿಕಟ್ಟಾಗಿ ಶುಚಿಯಾಗಿ ಉಣಬಡಿಸಲಿ ಎಂದು ಹೃದಯಾರೆ ಹಾರಯಿಸಿ ಪಥಕನ ಪರಿಚಯವನ್ನು ಪೂರೈಸುತ್ತೇವೆ. ಈ ಶಾಂತಿ ಮಂತ್ರದೊಡನೆ ಶ್ರೇಯೋಮಂತ್ರವೊಂದನ್ನು ನುಡಿಯುತ್ತೇವೆ.

"ಕೇವಲ ಗೈರಿಕ ಗೌರವವನ್ನು ಬಯಸುವವರು ಬಯಸಲಿ
ನೀನು ಮಾತ್ರ ಕಾವ್ಯಜೀವಿಯಾಗು, ಸಾಹಿತ್ಯ ಸಂಜೀವಿಯಾಗು
ಇದು ಪವಿತ್ರವಾದ ಪರಮೋನ್ನತವಾದ ಪರಮಾನಂದಕರವಾದ ಕಾರ್ಯ
ಇದು ಪ್ರಾಪಂಚಿಕ ಸತ್ಯ, ಪಾರಮಾರ್ಥಿಕ ಪಥ್ಯ
ಸಣ್ಣಪುಟ್ಟ ಸ್ವಭಾವಬೇಡ, ಸಾಹಿತ್ಯಪಂಥ ಬಿಡಬೇಡ
ಮುಂದುನಡೆ ಮುಂದುನಡೆ;
ನಿನ್ನ ಜೀವನವೆ ಒಂದು ಮಧುರ ಕಾವ್ಯವಾಗಲಿ"

ಸಿರಿಗನ್ನಡಂಗೆಲ್ಗೆ

ವಿಜಯ ಸಂವತ್ಸರ
೨-೧೨-೫೩

ಸೂರ್ಯ ಸಿಂಹಾಸನಾಧೀಶ್ವರ,
ಶ್ರೀ ಜ. ಚ. ನಿ. ಸಂಸ್ಥಾನ
ಗೂಳೂರು.

# "ಪಥಿಕ"ದ ನೆನಹು

ಹೊಸಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಕನ್ನಡ ಕವಿಕೋ
ಗಳ ಕುಕಿಲು ಇನಿದಾಗಿ ಕೇಳಿಬಂದಿತು. ಭಾವಗೀತವಾಹಿನಿಗೆ ಆಗ ಮ
ಪೂರ ಬಂದಂತಾಯಿತು.

ವ್ಯಕ್ತಿನಿಷ್ಠತೆ, ಸೌಂದರ್ಯಾನುಭವ, ಭಾವಪರತೆ, ನೇಮತೆ
ಭಾವಗೀತೆಯ ಪ್ರಮುಖ ಲಕ್ಷಣಗಳಾಗಿವೆ. ಮನವರಿಕೆಯನ್ನುಂಟುಮಾ
ಕಳಕಳಿಯ ಭಾವ, ಚಿತ್ರಮಯತೆಗಳಿಂದ ಭಾವಗೀತೆಯು ಪರಿಣಾಮ
ಯಾಗುತ್ತದೆ. ವ್ಯಕ್ತಿತ್ವ ನಿರೂಪಣೆಯಲ್ಲಿ ತೊಡಗಿದ ಕವಿಯು ಸಮ
ಭಾವನೆಗಳನ್ನು ಅಭಿವ್ಯಕ್ತಗೊಳಿಸುತ್ತಾನೆ. ನಿಸರ್ಗದ ಸೊಬಗು, ಮಾ
ನಲಿವು-ನೋವುಗಳು ಪ್ರೇಮ ದೇವರು ದೇಶಪ್ರೇಮ ಇತ್ಯಾದಿ ಭಾವಗ
ಭಾವಗೀತೆಯ ಕವಿಗಳು ಅಂದು ಬಳಸಿಕೊಂಡರು. ಪದ ಸೌಂದರ್ಯ, ಲ
ಪ್ರಾಸಗಳ ಬಳಕೆಯಿಂದ ಭಾವಗೀತೆಗೆ ಗೇಯತೆಯುಂಟಾಯಿತು. ಕ
ಭಾಷೆಗೆ ಹೊಸ ತಿರುವನ್ನು ಒದಗಿಸಿದ ಕಾಲವದು. ಬಿ. ಎಮ್. ಶ್ರೀ
" ಇಂಗ್ಲೀಷ ಗೀತೆಗಳು " ಎಂಬ ಕೃತಿಯು ಅಂದಿನ ಭಾವಗೀತೆಗಳಿಗೆ ಒ
ಮಾದರಿಯನ್ನು ಒದಗಿಸಿತು. ಭಾವನಾಪರವಶತೆಯೊಂದಿಗೆ ಆದರ್ಶ
ತೆಯೂ ಮೂಡಿಬಂದಿತು. ಆಗ ಭಾವಗೀತೆಯು ತತ್ತ್ವಪರತೆಯತ್ತ
ಸಾಗಿತು. ಈ ಬಗೆಯಲ್ಲಿ ಕನ್ನಡ ಭಾವಗೀತೆಯು ೧೯೫೦ರ ವರೆಗೂ
ಬಂದಿತು. ಈ ಮಧ್ಯ ಕುವೆಂಪು ಅವರ ಕಲ್ಕಿ 'ಅಂಬಿಕಾತನಯದ
ತುತ್ತಿನ ಬಲದಂತಹ ಉಗ್ರ, ಕ್ರಾಂತಿಕಾರಕ ಕವನಗಳು ಸೃಷ್ಟಿಯಾ
ಕೋಗಿಲೆಯ ಇಂಚರವು ಕ್ರಾಂತಿಯ ಕಹಳೆಯಾಗಿ ಮಾರ್ಪಟ್ಟ ಸನ್ನಿ
ವದು. ಅಂದಿನ ಪ್ರಗತಿಶೀಲ ಸಾಹಿತಿಗಳ ಆಂದೋಲನವು ಕನ್ನಡ

ರಂಗವಲ್ಲಿ ಪ್ರತಿಬಿಂಬಿತವಾದಂತಿಲ್ಲ. ೧೯೫೦ರ ನಂತರ ನವೋದಯಕಾಲದ ಭಾವಗೀತೆಗಳ ಹಾದಿಗಿಂತ ಭಿನ್ನವಾದ ದಿಸೆಯಲ್ಲಿ ಸಾಗುವ ಪ್ರವೃತ್ತಿ ತಲೆದೋರಿದೆ.

'ಪಥಿಕ' ಕವನ ಸಂಕಲನವು ೧೯೫೪ರಲ್ಲಿ ಪ್ರಕಟವಾಗಿದ್ದರೂ ಅದರಲ್ಲಿಯ ಕವನಗಳ ರಚನೆಯು ಕಾಲ ೧೯೫೦ಕ್ಕೆ ಪೂರ್ವದ್ದೆಂದು ತೋರುತ್ತದೆ. ಅಂತೆಯೇ ಆ ಕವನಗಳಲ್ಲಿ ನವೋದಯಕಾಲದ ದೃಷ್ಟಿ ಸ್ಪಷ್ಟವಾಗಿದೆ. ಈ ಸಂಕಲನದಲ್ಲಿ ೬೦ ಕವನಗಳಿವೆ. ಅವು ಚಿಂತನಪರವಾಗಿವೆ.

ಬಾಳಿನಲ್ಲಿ ನಲಿವಿನಂತೆ ನೋವು ಇದೆ. ಚಿಂತನಶೀಲನಾದ ಕವಿಗೆ ಬಾಳು ಹಲವಾರು ತೊಡಕುಗಳನ್ನು, ಸಮಸ್ಯೆಗಳನ್ನು ಒಡ್ಡುತ್ತಿದೆ. ಬಾಳಿನ ಸಮಸ್ಯೆಗಳು ಆಗಾಗ ಆತನ ಮನಸ್ಸನ್ನು ಗಾಸಿಗೊಳಿಸುತ್ತಿದೆ. ಆದರೆ ಶ್ರದ್ಧೆಯಿಂದ ಕೂಡಿದ ಕವಿಯು ದೈವೀಕೃಪೆ ಗುರುಕರುಣೆಗಳನ್ನು ಹಾರೈಸುತ್ತ ಬಾಳನ್ನು ಒಂದು ಪಯಣವಾಗಿ ಭಾವಿಸಿ ಧೀರಪಥಿಕನಂತೆ ಮುಂದೆಸಾಗಲು ನಿರ್ಧರಿಸುತ್ತಾನೆ. ಇಂತಹ ಮೂಡಿ ಕವನಗಳು ಈ ಸಂಕಲನದಲ್ಲಿವೆ.

ಮಾನವನು ಪರಮಸತ್ಯದ ಯಾತ್ರಿಕನೇ ಅಹುದು. ( A Pilgrim of ever lasting truth -Sri Aurobindo ) ಆದರೆ ಈ ದೃಷ್ಟಿಯು ಬಹು ಜನರಿಗೆ ಇಲ್ಲದೆ ಬೇಗನೆ ಮೂಡಿಬರುವದಿಲ್ಲ. ಅಂತೆಯೇ ಅವರಿಗೆ ಬಾಳ ಗೋಳಿನ ಸಂತೆಯಾಗುವುದು. 'ಪಥಿಕ' ಸಂಕಲನದ ಕವಿಗೆ ಮಾತ್ರ ಚಿಕ್ಕನಯುಸ್ಸಿನಲ್ಲಿಯೇ ಈ ದೃಷ್ಟಿ ಮೂಡಿಬಂದಿದೆ. ಅಂದು ಅದು ಬೆಳೆಯುವ ಚೇತನದ ಗುರುತಾಗಿ ಕಂಡುಬಂದಿತು. ಆಗ ಕಂಡುಬಂದ ಗುರುತು ಈಗ ಫಲಪ್ರದವಾಗಿ ಕಾಣುತ್ತಿದೆ. ಅಂದಿನ 'ಪಥಿಕ' ಸಂಕಲನದ ಕವಿ ಚಿತ್ತರಗಿ ಮಹಾಂತದೇವರು ಬನಾರಸದಲ್ಲಿ ವಿದ್ಯಾರ್ಥಿ ಕವನಸಂಕಲನದ ನನ್ನ ನುಡಿಯಲ್ಲಿಯ ಮಾತುಗಳನ್ನು ಗಮನಿಸಬೇಕು.

" ಈ ಪಥಿಕನು ಇನ್ನೂ ಅನನುಭವಿ, ವಿದ್ಯಾರ್ಥಿ ಪ್ರತಿಯೊಬ್ಬ ವ್ಯಕ್ತಿಗೆ ಮುಂದೆಸಾಗಲು ಹಿರಿಬಯಕೆಯಿದ್ದಂತೆ ಈತನಿಗೂ ಅದೆ. ಪಥಿಕನು

ಕಲ್ಲು ಮುಳ್ಳುಗಳನ್ನು ತುಳಿದರೂ ತಾಳಿ ಮುಂದೆಹೋಗಲು ಯು
ಬೇಕೆಂಬುವವನು........ "

ಅಂದಿನ 'ಪಥಿಕ' ಸಂಕಲನದ ಕವಿಯೇ ಇಂದಿನ ಶ್ರೀ ಮನ್ಮಹಾ
ನಿರಂಜನ ಜಗದ್ಗುರು ಶ್ರೀ ಗಂಗಾದರ ರಾಜಯೋಗೀಂದ್ರ ಮಹಾಸ್ವಾಮಿ
ಮೂರುಸಾವಿರಮಠ, ಹುಬ್ಬಳ್ಳಿ. 'ಪಥಿಕ' ಸಂಕಲನದ ಕವಿತೆಗಳ ರಚ
ಕಾಲದಿಂದ ಅವರು ಈಗ ಬಹು ಮುಂದೆಸಾಗಿದ್ದಾರೆ. ನಮ್ಮ ನಾ
'ಮಹಾಪಥಿಕ' ಆಗಿದ್ದಾರೆ. ಇಡಿಯ ದೇಶದಲ್ಲಿ, ಪರದೇಶಗಳಲ್ಲಿ
ಕೀರ್ತಿಶಾಲಿಯಾಗಿದ್ದಾರೆ.

'ಪಥಿಕ' ಸಂಕಲನದಲ್ಲಿ ವ್ಯಕ್ತಿನಿಷ್ಠ ಕವನಗಳಿವೆ;

ದಾರಿಗಾಣದೆ ಗುರುವೆ ಕುಳಿತಿರುವೆ
ಚಿಂತಿಸುತ್ತಲಿ ನಿನ್ನಯ
ದಾರಿದೋರುತ ಬೆಳಗುನೀಡುತ
ಮನೆಯ ಸೇರಿಸು ಎನ್ನನು

ಎಂಬುದಾಗಿ ಈ ಸಂಕಲನದ ಪ್ರಥಮ ಕವನ ಆರಂಭವಾಗುತ್ತಿದೆ. ಗು
ದಾರಿದೋರಿ ಬೆಳಕು ನೀಡಿದುದೂ ಆಗಿದೆ. ಅಂತಹ ಗುರುವನ್ನು ಕು
ನಾಲ್ಕಾರು ಕವನಗಳು ಇಲ್ಲಿ ಮೂಡಿಬಂದಿದೆ. ಅವು ಕವಿಯ ಗುರು
ನಿರ್ಭರತೆಯನ್ನು ಸ್ಪಷ್ಟಗೊಳಿಸುವಂತಿದೆ. ಬಾಲ್ಯದ ಪಾಠಶಾಲೆ
• ಶಿವಯೋಗ ಮಂದಿರ'ವನ್ನು ಅಲ್ಲಿಯ ಪತ್ರಿಕೆ 'ಸುಕುಮಾರ'ವನ್ನು
ಬೇರೊಂದು ಪತ್ರಿಕೆಯನ್ನು ಕುರಿತು ಒಂದೊಂದು ಕವನಗಳಿವೆ.
ಯನ್ನು ಕುರಿತು ಕವನದಲ್ಲಿಯ ಭಾವಪುಷ್ಪವರಳಿದಾಗ....ಹಾಡಿಬಿಡುವ
ಎಂಬ ಉಕ್ತಿಯಂತೆ ಮೂಡಿಬಂದ ಕವನಗಳು ಈ ಸಂಕಲನದ
೧೫-೮-೪೭ಕ್ಕೆ ದೊರೆತ ಭಾರತ ಸ್ವಾತಂತ್ರ್ಯವನ್ನು ಕುರಿತು ಒಂದೆ
೩೦-೧-೪೮ಕ್ಕೆ ನಡೆದ ಮಹಾತ್ಮಾ ಗಾಂಧಿಯವರ ಕೊಲೆಯನ್ನು ಕ
ಒಂದು, "ದೀಪಾವಳಿ" "ಶಮೀ ಸಮರ್ಪಣ"ಗಳನ್ನು ಕುರಿತು ಒಂದೊ
"ಒಡವ"ನನ್ನು ಕುರಿತು ಒಂದು ಕವನಗಳಿವೆ. ಕೆಲವು ನೈತಿಕ ಕವನ

ಇವೆ. ಉಳಿದ ಕವನಗಳು ವ್ಯಕ್ತಿನಿಷ್ಠವಾಗಿದ್ದು 'ಪಥಿಕ'ನು ಕೈಕೊಂಡ ಪದಕ್ರಮಣವನ್ನು ಕುರಿತಿವೆ.

ಇಲ್ಲಿಯ ಪ್ರಥಮ ಕವನದ ಹೆಸರೇ ಪಥಿಕ. ಜೀವನಪಥದಲ್ಲಿ

ಕಾಳರಾತ್ರಿಯು ಮುಸುಗು ಮುತ್ತಿದೆ
...................................
ಮೇಲೆ ಮೇಘವು ಗುಡುಗುಹಾಕುತ
ಭಯದ ಬೆದರಿಕೆ ಕೊಡುತಿದೆ
...............—...................
—...................................
ಮುಂದೆ ಹೋದಡೆ ತಗ್ಗು ದಿನ್ನೆಯು

ಹೀಗಿದ್ದೂ ಪಥಿಕ ಧೀರತನದಿಂದ ಮುಂದೆ ಸಾಗಬೇಕು.

ನಡೆ ಮುಂದೆ

ಸೋಲಿನಲಿ ಇರುತಿರಲು ಮುಂದಿನಾ ಹಿರಿಗುರಿಯು
ದಾರಿಯನು ಮರೆಯುದಿರ್ಕೆ
.....................................

ನಡೆ ಮುಂದೆ ದೃಢಮನದಿ

ಪಥಿಕರಿಗೆ ಹಿರಿಯ ಗುರಿಯೊಂದಿರಬೇಕಲ್ಲ! ಆನಂದ ಭಿಕ್ಷೆಯ ಪಡೆಯಲೆಂದು ಬುದ್ಧ ಪಥಿಕನಾದ. ಜ್ಞಾನಭಿಕ್ಷುವಾಗಿ ಸರ್ವಜ್ಞ ಕವಿ ಪಥಿಕನಾದ. ಈ ಕವಿಯಾದರೂ ' ಶಿವಶಾಂತಿ ಹೊಂಬೆಳಗು ' ಅರಸಲೆಂದು ಪಥಿಕನಾದ. ದೀಪಾವಳಿಯ ಸೊಡರಿನ ಸಾಲುಗಳು ಒಳಬೆಳಕಿಗೆ ಪ್ರಚೋದನೆಯನ್ನಿತ್ತಿವೆ;

ಹೃದಯದೀ ಪ್ರಣತೆಯೊಳು ಸದ್ಭಕ್ತಿ ತೈಲವನು
ಸುವಿಚಾರ ಬತ್ತಿಯನು ಹೊಸೆದಿಟ್ಟು ಹಚ್ಚಿದೊಡನೆ
ಗುಡಿಯೊಳಗೆ ಮೆರೆಯುತ್ತ ಕುಳಿತಿರುವ ಈಶ್ವರನು
ಕೊಡುತಿಹನು ದರ್ಶನವ ಪರಂಜ್ಯೋತಿ ಬೆಳಗಿನೊಳು

"ಶಮೀ ಸಮರ್ಪಣ" ಹಬ್ಬವು ಕವಿಗೆ ಆತ್ಮಸಿದ್ಧಿಯ ಸಂಕೇತವಾಗುತ್ತಿದೆ. ಅಲ್ಲಿ

ವಿಜಯ ಪಡೆಯದ ಮನುಜ
ಒಣಗಿರ್ಪ ಎಲೆಯಂತೆ
ಬತ್ತಿರುವ ಕೆರೆಯಂತೆ
ಒಡೆದ ಕನ್ನಡಿಯಂತೆ

ಎಂಬ ಸುಂದರ ಹೋಲಿಕೆಗಳಿವೆ. "ಶಿವನಪುಟ್ಟಿ"ಯಲ್ಲಿ ಅರ್ಥವತ್ತಾದ
ರೂಪಕ ಚಿತ್ರವಾಗಿದೆ;

ಹೃದಯಾಕಾಶದಿ ಏರಿಸು ಪುಟ್ಟಿ
ಅದರೊಳ್ ಸುಜ್ಞಾನ ದೀಪವನಿಟ್ಟು
ಮುತ್ತಿದ ಕತ್ತಲೆ ನೊತ್ತವನಟ್ಟಿ
ಸುತ್ತುತ ಬರುತಿಹ ಗಾಳಿಯ ಕಟ್ಟಿ

ನಭದಲಿ ಬೆಳಗಲಿ ಚಿನ್ಮಯ ಕಿರಣ
ತುಂಬಲಿ ಪುಟ್ಟಿಯು ದೇವರ ಸ್ಮರಣ
ಆಗಲಿ ಜನನದ ಮರಣದ ಹರಣ
ಇಂತೇರಿಸು ಶಿವಪುಟ್ಟಿಯ ಜಾಣ

ಇಲ್ಲಿಯ ಸಲೀಸಾದ ಪದಗಳ ಹೊಂದಾವಣೆಯನ್ನು ಅರ್ಥಗೌರವವನ್ನು
ಗಮನಿಸಬೇಕು.

ಮಟ್ಟಿ ಹೊಡೆಯುವವಗೆ ಎಂಬ ಕವನದಲ್ಲಿಯೂ ಸ್ವಾರಸ್ಯಕರವಾದ
ರೂಪಕ ಸೃಷ್ಟಿಯಿದೆ.

ಮಟ್ಟಿ ಹೊಡೆಯೋ ನೀನು ಇಂತು
ಜ್ಞಾನಕರ್ಮ ಎತ್ತುಗಳಿಗೆ
ಧ್ಯಾನವೆಂಬ ನೊಗವಹಾಕಿ
ಮಟ್ಟಿ ಹೊಡೆಯೋ

........ಹೃದಯಭೂಮಿ ತೊಳೆದು
ಮುಕ್ತನಾಗುನೀ.

ಜೀವನದ ವೃತ್ತಿಗಳನ್ನು ಅಧ್ಯಾತ್ಮಕ್ಕೆ ತಿರುಗಿಸುವ ಹರಿಹರದೇವನ ರಗಳೆಗಳಲ್ಲಿಯೆ ರೂಪಸೃಷ್ಟಿಯು ಸುಪ್ರಸಿದ್ಧವಾಗಿದೆ. ಈ ಸಂಕಲನದ 'ನಾವಿಕನನ್ನು ಕುರಿತು' ಎಂಬ ಕವನದಲ್ಲಿಯೂ ರೂಪಕವಿದೆ.

'ಇದಾವುದು' ಎಂಬ ಕವನದಲ್ಲಿ ಸರ್ವಜನರ ಹೃದಯದೊಳಿರುವ ಹಂಬಲವನ್ನು ಹಕ್ಕಿಯಾಗಿ ಭಾವಿಸಲಾಗಿದೆ. "ರೆಕ್ಕೆ ಬಲಿತು ಹಾರಿಹೋದ ಬಯಕೆ ಮೊಳೆತ" ನಂತರವೂ "ತಿಂದು ತಿಂದು ತೇಗಿ ಹಾರದಿರಲು" ವ್ಯಥೆಯೆನಿಸುವುದು ಸಹಜವೇ. ಪಥಿಕ ನಿಂತಲ್ಲಿಗೆ ನಿಲ್ಲದಾಗದಲ್ಲ! ಆತನು ಗತಶೀಲನಾಗಲೇಬೇಕು. ಮುಂದೆ ಸಾಗುವುದೇ ಜೀವಂತತನದ ಲಕ್ಷಣ.

'ಮುಕುತಿಯುಟ್ಟವನೇರು
ದೇವನಡಿಯೊಳು ಸೇರು'

ಎಂಬುದಾಗಿ ಕವಿ ಹೃದಯದ ಹಕ್ಕಿಯನ್ನು ಎಚ್ಚರಿಸುತ್ತಾನೆ. ಈ ದಿಶೆಯಲ್ಲಿ "ಶಾಂತಿತಪ" "ವಿರತಿಗಂಧ" "ಭಕುತಿ"ಗಳು ನೆರವಾಗುತ್ತಿವೆ.

ಬಾಳಿನ ಪಯಣದಲ್ಲಿ ನಿಶೆಯ ಅನುಭವವೂ ಅನಿವಾರ್ಯ, ಅಂತೆಯೆ "ಧ್ಯಾನದ ದೀಪವ ಹಚ್ಚುತ" ಎಚ್ಚರಗೊಂಡು "ಸತ್ಯದ ಬೆಳಕಿನ ಹಾದಿಯ" ಕಂಡುಕೊಳ್ಳುವುದು ಅವಶ್ಯಕವಾಗಿದೆಯೆಂದು "**ನಿಶೆಗೆ**" ಎಂಬ ಕವನದಲ್ಲಿ ನಿರೂಪಿಸಲಾಗಿದೆ.

ಗುರುವಿನ ಆಗಮನವನ್ನು ಕುರಿತ ಉತ್ಕಟಭಾವವು "ಆಹ್ವಾನ" ಕವನದಲ್ಲಿ ವ್ಯಕ್ತವಾಗಿದೆ:

ಬಾಗಿಲವ ತೆರದಿರುವೆ ಬಾ ಬೇಗ ಗುರುವೆ
ದಾರಿಯನು ನೋಡುತ್ತ ಕುಳಿತಿರುವೆ ಬಾ

ಹೃದಯಮಂಟಪದೆನ್ನ ಚಿಚ್ಚರಣ ಕಿರಣಗಳ
ಹರಡುತ್ತ ಕತ್ತಲೆಯ ನಶಿಸುತ್ತ ಬಾ ಬಾ

ಸಮರ್ಪಣಭಾವದಿಂದ ಮನಃಶಾಂತಿಯನ್ನು ಪಡೆಯುವ ಭಾವ "ಸಮರ್ಪಣ" ಕವನದಲ್ಲಿ ಮೂಡಿಬಂದಿದೆ.

ಬಾಳಿನ ಪಯಣದಲ್ಲಿ ಪ್ರೋತ್ಸಾಹದ ಆವಶ್ಯಕತೆಯಿದೆ. ಅಂತೆಯೇ "ಪ್ರೋತ್ಸಾಹ' ಎಂಬ ಕವನದಲ್ಲಿ—

'ಪ್ರೋತ್ಸಾಹವಿಲ್ಲದಲೆ
ಸಾಗಿಸುವ ಆ ಬಾಳು
ಪಥಿಕದ ಪಟ್ಟಣಲ್ಲವೇ?'

ಎಂದು ಹೇಳಲಾಗಿದೆ. ಆದರೆ ಗುರಿ ತಲುಪಬೇಕೆಂಬ ಸಿಧ್ಧಾಂತ ದೃಢ-ವಾಗಿರುವಾಗ ಪ್ರೋತ್ಸಾಹ ದೊರೆಯದಿದ್ದರೂ ಮುಂದುವರಿಯಬೇಕೆಂಬ ಹುಮ್ಮಸ್ಸು ಕವಿಗಿದೆ. ಅಂತೆಯೇ "ಬಿಡುವನೇಂ" ಎಂಬ ಕವನದಲ್ಲಿ—

ಕಾರ್ಯವನು ಮಾಡುವಗೆ
ಪ್ರೋತ್ಸಾಹ ನೀಡಿದರೆ
ಕಾರ್ಯವನು ಬಿಡುವನೇಂ

ಎಂಬ ಛಲ ವ್ಯಕ್ತವಾಗಿದೆ. ಪಥಿಕನು ಮುನ್ನಡೆಯಲು ಮುಖ್ಯವಾಗಿ ಬೇಕಾದುದು ಪ್ರೇರಣೆ;

ಪ್ರೇರಣೆಯೇ! ಧಾರುಣಿಗೆ ಚೇತನವ ಕೊಡುತಿಹುದು
ಪಥಿಕಂಗೆ ದಾರಿಯನು ತೋರಿ ಸುಖನೀಡುವುದು

(—ಪ್ರೇರಣೆಗೆ)

ಪಥಿಕನು ಬಾಳಿನ ಒಡತನವನ್ನು ಗಮನಿಸುವದಿಲ್ಲ;

ಹೃದಯಧನವಿರುತಿರಲು
ಆನಂದ ಪಡೆಯಲ್ಕೆ
ನುತ್ತೇಕೆ ಅಳಯುದು
ಅಳಿಯುತಿಹ ಹೊರಧನಕೆ

ಭಾವದಾ ಕಿರಣಗಳು
ಬೆಳಗುತ್ತ ಹೋದಂತೆ
ಬಡವನೇ ಚಿರಧನಿಕ
ನಾಗಿ ತಾ ಮೆರೆವನಂ

(—ಬಡವ)

ಹೃದಯ ಸಂಪತ್ತಿರುವಾಗ ಹೊರಗಿನ ಧನದ ಅವಶ್ಯಕತೆಯಿರಬೇಕಾಗಿಲ್ಲ. ಭಾವದಾ ಕಿರಣಗಳು ಬೆಳಗುತ್ತಿದ್ದರೆ ಅಂತಹನೇ ಧನಿಕ ಇಂತಹ ನಿಲುವೆ ಈ ಕವಿಯದಾಗಿದೆ. ಆತ್ಮ ಜಾಗೃತಿಯೇ ಪಥಿಕನಿಗೆ ಮಹತ್ವದ ಆಸರೆ. ಅಂತೆಯೆ ಕವಿ ಹೇಳುತ್ತಾನೆ—

ಸಾಕಿನ್ನು ಎದ್ದೇಳಿ ಮೋಹನಿದ್ರೆಯ ಬಿಟ್ಟು
ಹೊರಬನ್ನಿ ಭರದಿಂದ ಜ್ಞಾನವಸ್ತ್ರವನುಟ್ಟು
ಮನದೊಳಗೆ ತುಂಬಿರುವ ಕಾಮದಾಶೆಯ ಸುಟ್ಟು
ತನುವಿನೊಳಗೆ ಹೊಕ್ಕಿರುವ ಭ್ರಾಂತಿಯನು ಬಿಟ್ಟು
..........................................................
..........................................................
ತೆರೆಯಿರೈ ಒಳಗಣ್ಣು ಹರಿಯಿರೈ ಹಗ್ಗವನು
ಮುರಿಯಿರೈ ಮದವನ್ನು ತೊರಿಯಿರೈ ಶೋಕವನು
ಅರಿಯಿರೈ ಮುಂದಿನ ಹಿರಿಗುರಿಯ ದಾರಿಯನು

(—ಉತ್ತಿಷ್ಠತ)

ಅಂತೂ ಪಥಿಕ 'ಹಿರಿಗುರಿಯ ದಾರಿಯನು' ಅರಿತುಕೊಂಡಿದ್ದಾನೆ. ಶ್ರದ್ಧೆಯಿಂದ ಕೂಡಿದ್ದಾನೆ. ಹರ–ಗುರು ಕೃಪೆಗಳ ಆಸರೆಯನ್ನು ಅಪೇಕ್ಷಿಸುತ್ತ ಧೀರತನದಿಂದ ಮುಂದೆಸಾಗಲು ನಿರ್ಧರಿಸಿದ್ದಾನೆ. ಕಿರಿಯ ವಯಸ್ಸಿನಲ್ಲಿ ಈ ಬಗೆಯ ನಿಲುವು ಶ್ಲಾಘನೀಯವಾದುದಾಗಿದೆ. ಈ ಬಗೆಯ ನಿಲುವನ್ನು ಕವನ ರೂಪದಲ್ಲಿ ಇಲ್ಲಿ ಅಭಿವ್ಯಕ್ತಗೊಳಿಸಲಾಗಿದೆ.

ಈ ಸಂಕಲನದ ಕವನಗಳಲ್ಲಿ ಮುಕ್ತಛಂದಸ್ಸು, ಹಾಡಿನಮಟ್ಟು, ಷಟ್ಪದಿ, ಅನುಷ್ಟುಪ್‌ಗಳನ್ನು ಬಳಸಿಕೊಳ್ಳಲಾಗಿದೆ. ಭಾಷೆ ಸರಳವೂ, ಸ್ಪಷ್ಟವೂ ಆಗಿದೆ. ಆದರೆ ಬಂಧುರತೆಯಿಂದ ಕೂಡಿ ಅದಿನ್ನು ಹದಗೊಳ್ಳ

ಬೇಕಾಗಿದೆ. ಈ ಕವನ ಸಂಕಲನ ಕವಿಯ ಪ್ರಥಮ ಪ್ರಯತ್ನ. ಇಲ್ಲಿಯ ಕವನಗಳನ್ನು ಮೊಗ್ಗುಗಳೆಂದು ಹೇಳಬಹುದು. ಆದರೆ ಈ ಮೊಗ್ಗು-ಗಳಲ್ಲಿಯೂ ಸೌರಭವನ್ನು ಗುರುತಿಸಲು ಸಾಧ್ಯವಿದೆ. ಬಾಳಿನ ಪಯಣವನ್ನು ಕುರಿತ ಈ ಕವಿಯ ದೃಷ್ಟಿಯು ಉನ್ನತವಾದುದೆಂಬ ಮಾತು ಈ ಸಂಕಲನ ದಿಂದ ತಿಳಿದುಬರುವಂತಿದೆ. ಕವಿಯಾಗಿ ಹಾಡಿ ಬಾಳಿನ ಸೊಗಸನ್ನು ಹೆಚ್ಚಿಸಿ ಕೊಳ್ಳುವ ದೃಷ್ಟಿ ಈ ವಥಿಕನಿಗಿದೆ. ಆ ಸೊಗಸು ಕವಿಗೆ ಮಾತ್ರವಲ್ಲ, ಓದುಗರಿಗೂ ದೊರೆಯುವಂತಿದೆ.

ಬಾಳನ್ನು ಗಂಭೀರವಾಗಿ ಎದುರಿಸುವ ದೃಷ್ಟಿ, ಉದಾತ್ತ ಭಾವಲಹರಿ-ಗಳು ಇಲ್ಲಿ ಕಂಡುಬರುತ್ತವೆ.

ಸ. ಸ. ಮಾಳವಾಡ.

# ನನ್ನನುಡಿ

## ( ಪ್ರಥಮ ಮುದ್ರಣ )

*One of the pleasantest things in the world is going a journey....The soul of a journey is liberty, perfect liberty, to think, feel do just as one pleases.*

—WILLIAM HAZLITT.

ಈ ಪಥಿಕನು ಇನ್ನೂ ಅನನುಭವಿ, ವಿದ್ಯಾರ್ಥಿ, ಪ್ರತಿಯೊಬ್ಬ ವ್ಯಕ್ತಿಗೆ ಮುಂದೆ ಸಾಗಲು ಹಿರಿಬಯಕೆಯಿದ್ದಂತೆ ಈತನಿಗೂ ಅದೆ. ಪಥಿಕನು ಕಲ್ಲು ಮುಳ್ಳುಗಳನ್ನು ತುಳಿದರೂ ತಾಳಿ ಮುಂದೆ ಹೋಗಲು ಯತ್ನಿಸಬೇಕೆಂಬುವವನು. ಪಥಿಕನು ಹಾಡಿರುವ ಕವನಗಳನ್ನು ಕೇವಲ ಹೊರನೋಟದಿಂದ ನೋಡದೇ ಸ್ವಲ್ಪ ದೂರದೃಷ್ಟಿಯ ವಿಚಾರವಿಟ್ಟು ಓದಿದಾಗ ವೇದ್ಯವಾಗುವದು. ಪಥಿಕನು ೪–೫ ವರ್ಷಗಳಿಂದ ಆಗಾಗ ದಾರಿಯಲ್ಲಿ ಹಾಡಿದ ಕವನಗಳನ್ನು ಇಲ್ಲಿ ಸಂಗ್ರಹಿಸಿ ವಾಚಕರ ಕೈಗೆ ಕೊಟ್ಟಿದ್ದಾನೆ. ಇದರಲ್ಲಿರುವ ಹಲಕೆಲವು ಕವನಗಳು, ಜೀವನ ಜಯಕರ್ನಾಟಕ, ಶರಣಸಾಹಿತ್ಯ, ಸುಕುಮಾರ, ಅಮರವಾಣಿ, ಸಾವಧಾನ, ನವಯುಗ ಮುಂತಾದ ಪತ್ರಿಕೆಗಳಲ್ಲಿ ಈಗಾಗಲೆ ಬೆಳಕು ಕಂಡಿವೆ. ಆ ಮಾನ್ಯ ಸಂಪಾದಕರರೆಲ್ಲರನ್ನು ಇಲ್ಲಿ ಸ್ಮರಿಸದಿರಲಾರೆ.

ಪಥಿಕನು ಬಲಶಾಲಿಯಾಗಿ ಮುಂದೆ ನಡೆಯಲ್ಕೆ ಕೋಲನಿತ್ತು; ಮಮತೆಯಿಂದ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜ. ಪ. ನಿಡುಮಾಮಿಡಿ ಶ್ರೀ ಚನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು ಬರೆದ ಮುನ್ನುಡಿಯೇ ಪಥಿಕನಿಗೆ ಹೊಂಗುಡಿ.

ಈ ಪಥಿಕನ ಪರಿಚಯ ಪ್ರತಿಯೊಬ್ಬರಿಗೂ ಗೊತ್ತಾಗಬೇಕೆಂಬುದು "ತ್ಯಾಗವೀರ ಶ್ರೀ ಶಿವಶಂಕರಪ್ಪನವರು ಚಿತ್ತರಗಿ ಅವರ ಮಹದಾಶೆ. ಅಂತೆಯೇ ಮುಂದೆ ಬಂದು "ಪಥಿಕ" ಪುಸ್ತಕವನ್ನು ಸುಂದರವಾಗಿ ಅಚ್ಚು ಮಾಡಿಸಲು ಸಿದ್ಧರಾಗಿದ್ದಾರೆ. ತ್ಯಾಗವೀರ ಶಂಕರಪ್ಪನವರ ಜನ್ಮಸ್ಥಳ ಚಿತ್ತರಗಿ. ಇವರು ಚಿತ್ತರಗಿ ಮಹಾಂತೇಶ ಮಠದ ಪೀಠಾಭಿಮಾನಿಗಳು. ಚಿತ್ತರಗಿ ಪೀಠದ ಕೀರ್ತಿ ಕೇವಲ ಕರ್ನಾಟಕವಲ್ಲದೆ ಭಾರತದ ತುಂಬ ಹರಡ ಬೇಕೆಂಬುದನ್ನು ಹೊಂಗನಸು ಕಟ್ಟಿದವರು; ಇವರು ಈಗಾಗಲೇ ತಮ್ಮ ಔದಾರ್ಯಗುಣದಿಂದ ಕರ್ನಾಟಕದಲ್ಲಿ ತುಂಬಾ ಹೆಸರು ಗಳಿಸಿದ್ದಾರೆ. ಇವರು ಸರಳ ಜೀವಿಗಳಿದ್ದಂತೆ ಸಾಹಿತ್ಯಾಭಿರುಚಿಯುಳ್ಳವರಾಗಿದ್ದಾರೆ. ಅಂತೆಯೇ ೬-೭ ಬುಕ್ಕುಗಳನು ಈಗಾಗಲೇ ಅಚ್ಚುಮಾಡಿಸಿ ಚಿರಕೀರ್ತಿ ಗಳಿಸಿದ್ದಾರೆ. ಬಸವೇಶ್ವರ ಕಾಲೇಜಕ್ಕೆ ೨೦ ಸಾವಿರ ರೂಪಾಯಿಗಳನ್ನು ಕೊಟ್ಟು ತಮ್ಮ ತ್ಯಾಗಗುಣ ತೋರಿಸಿದ್ದಾರೆ. ಬ್ಯಾಂಕಿನ ಕ್ಲಾರ್ಕರಾಗಿ, ಹೀಗೆ ಸಮಾಜಸೇವೆ ಮಾಡುವವರು ದೊರೆಯುವದು ತೀರ ವಿರಳ. ಎಷ್ಟೋ ಬಡ ಹುಡುಗರಿಗೆ ಧನಕೊಟ್ಟು ಓದಿಸಿದ್ದಾರೆ. ಅಲ್ಲದೆ ಪರೀಕ್ಷೆಯೊಳಗೆ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಚಿನ್ನದ ಪದಕ ಗಳನ್ನು ಕೊಟ್ಟು ಪ್ರೋತ್ಸಾಹಿಸಿದ್ದಾರೆ. ಇವರು ಪ್ರೋತ್ಸಾಹಿಗಳು, ತ್ಯಾಗ ವೀರರು ವಿಜಯ ಮಹಾಂತೇಶನಲ್ಲಿ ಭಕ್ತಿ ವಿಶ್ವಾಸವನ್ನಿಟ್ಟುಕೊಂಡವರು. ಕೀರ್ತಿಶಾಲಿಗಳು. ಅವರಿಗೆ ವಿಜಯ ಮಹಾಂತೇಶನು ಆಯುರಾರೋಗ್ಯ ವನ್ನು ದಯಪಾಲಿಸಲೆಂದು ಹಾರೈಸುವೆ.

ಮುಕ್ಕಾಂ – ಬನಾರಸ
೨೬-೧೨-೧೯೭೩.

ಮಹಾಂತದೇವರು ಚಿತ್ತರಗಿ.

# ಪ್ರಕಾಶಕರ ನುಡಿ

ಪಥಿಕ ಕವನ ಸಂಕಲನದ ಕರ್ತರು ಶ್ರೀ ಮೂಜಗಂ. ಅವರೇ ಸಧ್ಯದ ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು. ಅವರ ವಿದ್ಯಾರ್ಥಿ ಜೀವನದಲ್ಲಿ ರಚಿಸಿದ ಕವನಗಳ ಸಂಗ್ರಹ ಮೊದಲ ಪ್ರತಿಗಳು ತೀರಿದ್ದರಿಂದ ದ್ವಿತೀಯ ಮುದ್ರಣ ಕೈಗೆತ್ತಿಕೊಳ್ಳಲಾಗಿದೆ.

ಶ್ರೀ ಜಗದ್ಗುರುಗಳವರ ಹೃದಯತಂತಿ ಭಕ್ತಿ, ವೈರಾಗ್ಯ, ಅನುಕಂಪ, ಕರುಣೆ, ಕಿಂಕರತ್ವದ ಝೇಂಕಾರ ಹೊರಹೊಮ್ಮಿಸಿ ಅವರ ಹಿರಿಹಂಬಲದ ಸಂದೇಶವಾಗಿ ಅವರ ಕವನಗಳು ಒಡಮೂಡಿಬಂದಿವೆ; ಸಾಹಿತ್ಯದ ಬಗ್ಗೆ ಅವರ ಒಲುಮೆಗೆ ಸಾಕ್ಷಿಯಾಗಿ ನಿಂತಿವೆ. ವಿಶ್ವತೋಮುಖದತ್ತ ಸಾಗಿದ ಅವರ ವಿಚಾರವ್ಯಾಪ್ತಿಯ ಹಿನ್ನೆಲೆಯಲ್ಲಿ ಎಂತಹ ಚಿಂತನದ ಅಧ್ಯಾಯಗಳಿವೆ ಎಂಬುದಕ್ಕೆ ಈ ಕವನಸಂಕಲನ ಕೈಗನ್ನಡಿಯಾಗಿದೆ. ವಿದ್ಯಾರ್ಥಿ ಜೀವನದಲ್ಲಿ ಅವರು ತಮ್ಮ ಒಲವು-ನಿಲವುಗಳನ್ನು ನಿರ್ದಿಷ್ಟ ದಿಶೆಯಲ್ಲಿ ಸಂಗಳಿಸಿಕೊಂಡು ಮುನ್ನಡೆದಿದ್ದಾರೆ, ಎಂತಲೇ ಇಂದು ಹಿರಿಮೆಯ ಮೆಟ್ಟಿಲು ಹತ್ತಿದ್ದಾರೆ. ಸಾಹಿತ್ಯದ ಬಗ್ಗೆ ಇರುವ ಅವರ ಅಪಾರ ಒಲುಮೆ ಇಂದು ನಿನ್ನೆಯದಲ್ಲ, ಬಾಲ್ಯದಿಂದಲೇ ಮೈಗೂಡಿ ಬಂದಿದ್ದು, ಎಂತಲೆ ಅದು ಇಂದು ಮೇಲ್ಮೆಯತ್ತ ಮನಚಾಚಿದೆ. ಬಾಳಸಾರ್ಥಕದ ಸೀಮೆಯತ್ತ ಪ್ರೇರೇಪಿಸಿದೆ.

ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳದ ಪ್ರಕಾಶನದಿಂದ ಈ "ಪಥಿಕ" ಕವನ ಸಂಕಲನ ಪ್ರಕಟವಾಗುತ್ತಲಿರುವದು ಹೆಮ್ಮೆಯ ವಿಷಯವಾಗಿದೆ.

-+++-

# ಕವನಗಳ ಕ್ರಮ

# ಪಥಿಕ

( ದಾಟಿ : ದೋಣಿಸಾಗಲಿ ಮುಂದೆ ಹೋಗಲಿ ಎಂಬಂತೆ )

ದಾರಿಗಾಣದೆ ಗುರುವೆ ಕುಳಿತಿಹೆ
ಚಿಂತಿಸುತ್ತಲಿ ನಿನ್ನಯ
ದಾರಿದೋರುತ ಬೆಳಗು ನೀಡುತ
ಮನೆಯ ಸೇರಿಸು ಎನ್ನಯ

೧

ಕಾಳರಾತ್ರಿಯ ಮುಸುಗು ಮುತ್ತಿದೆ
ದಿಕ್ಕು ತಪ್ಪುತಲಿರುವೆನು
ಧೂಳು ಸೂಸುವ ಭರದಿ ಬೀಸುವ
ಗಾಳಿ ಹೊಡೆತವ ಸಹಿಸೆನು
ಮೇಲೆ ಮೇಘವು ಗುಡುಗು ಹಾಕುತ
ಭಯದ ಬೆದರಿಕೆ ಕೊಡುತಿದೆ
ಕೋಲು ಮಿಂಚದು ಒಮ್ಮೆ ಒಮ್ಮೆಯೆ
ಮಿಂಚಿ ಬೆಳಕನು ತರುತಿದೆ

೨

ಜನದ ಸುತ್ತಲು ಕಳ್ಳಕಾಕರು
ವಾಸಮಾಡುತ ಹೊಂಚುತ
ಅಣಗಿಕೊಂಡಿಹರಂತೆ ಧನವನು
ಹಾದಿಗಾರರ ಸುಲಿಯುತ

ಮುಂದೆ ಹೋದಡೆ ತಗ್ಗುದಿನ್ನೆಯು
ಮತ್ತೆ ಪಯಣವ ತಡೆವುದು
ಮುಂದುವರಿಯಲು ದೊಡ್ಡ ಬೆಟ್ಟವು
ಎದುರು ಕಾಣುತಲಿರುವುದು

೩

ಹೊಳೆಯು, ಹಳ್ಳವು ಕೆರೆ ಸರೋವರ
ತುಂಬಿ ಹರಿಯುತಲಿರುವವು
ಈಜಿ ಹೋಗಲು ಬರುವದೆಂದರೆ
ನಡುವೆ ಮೊಸಳೆಗಳಿಳಿವವು
ಕುರುಡನಂದದಿ ಹೆಳವನಂದದಿ
ಸುತ್ತು ತಿರುಗುವದೊದಗಿದೆ
ಬೆಳಕು ಇಣುಕದ ಗಹ್ವರಂದದಿ
ನನ್ನ ಜೀವನವಾಗಿದೆ.

-+-***-+-

೨

# ನಡೆ-ಮುಂದೆ

೧

ಸೋಲಿನಲಿ ಸೋತಿಗಲು ಮುಂದಿನಾ ಹಿರಿಗುರಿಯ
ದಾರಿಯನು ಮರೆಯದಿರೈ
ದಾರಿಯಾ ನಡೆವವನು ಎಡಹದಲೆ ಇರುವನೇಂ?
ಎಡಹಿದರೂ ಹೆದರದಿರೈ

೨

ನೋಡದಿರು ಜೇಡದಿರು ಹಿಂದುಳಿದ ಹಾದಿಯನು
ನಡೆ-ಮುಂದೆ ಧೃಢಮನದಿ
ಶಿಲ್ಪಿಗನ ಶಿಲೆಯೊಡೆದು ಹೋದರವ ಚಿತ್ರವನು
ಕೊರೆಯುವದ ಬಿಡುವನೇನು ?
ನೀಂ ಮುಂದೆ ನಡೆಯದೊಡೆ ಮಾಯರಕ್ಕಸರೆದ್ದು
ಮುತ್ತುವರು ಜವದಿ ನಿನ್ನಂ
ಗಜನಿಕರ. ಓಡುತ್ತ ಕಾಡನ್ನು ತುಳಿಯುತ್ತ
ಹೂಹಣ್ಣು ಮುರಿಯುವಂತೆ

# ಭಿಕ್ಷುಕ

೧

ಹಸಿದಿರುವೆ ಓ ತಂದೆ ಬಂದಿರುವೆ ನಿನ್ನ ಬಳಿ
ಬೇಡುವೆನು ಭಿಕ್ಷೆಯನ್ನು
ನೀಡದಿರೆ ನಾನಿನ್ನು ಸಾಯುವೆನು ಬಲು ಬಳಲಿ
ನಿಂತಿಹೆನು ನೋಡುಮುನ್ನ

೨

ಕಲಿಕಾಲವಿಹುದೀಗ ನೀಡುವರು ಬಹಳಿಲ್ಲ
ಎಲ್ಲರನು ಕೇಳಿ ಬಂದೆ
ಉತ್ತರವ ನಿತ್ತರೈ ನಡೆಮುಂದೆ ನೀನಿಲ್ಲಿ
ನಿಲ್ಲದಿರು ಹೋಗು ಮುಂದೆ

೩

ಧನಕನಕ ಕೇಳದಲಿ ಇಂತಿವರು ಮಾಡುವರು
ಬಡಕೊಂಡೆ ಎನ್ನ ಕುಕ್ಷಿ
ಕೃಪೆಮಾಡು ಜವದಿಂದೆ ಅಂತರ್ಯಾಮಿ ಓ ಗುರುವೆ
ಬೇಡುವೆನು ಜ್ಞಾನಭಿಕ್ಷೆ

# ದೀಪಾವಳಿ

೧

ದೀಪಗಳ ಸಾಲಿನೊಳು ಗರ್ಭಗುಡಿ ರಾಜಿಪುದು
ಮುತ್ತಿರುವ ಕತ್ತಲೆಯ ಮೊತ್ತವನು ಒತ್ತಿಹುದು
ಬೆಳಕನ್ನು ತಂದಿಹುದು ಶಾಂತಿಯನು ಕೊಡುತಿಹುದು
ಸತ್ಯತೆಯ ಕಿಡಿ ನಿಕರ ಚಿತ್ತದೊಳು ಚಿಮುಕುವದು

೨

ಹೃದಯದೀ ಪ್ರಣತೆಯೊಳು ಸದ್ಭಕ್ತಿ ತೈಲವನು
ಸುವಿಚಾರ ಬತ್ತಿಯನು ಹೊಸೆದಿಟ್ಟು ಹಚ್ಚಿದೊಡೆ
ಗುಡಿಯೊಳಗೆ ಮೆರೆಯುತ್ತ ಕುಳಿತಿರುವ ಈಶ್ವರನು
ಕೊಡುತಿಹನು ದರ್ಶನವ ಪರಂಜ್ಯೋತಿ ಬೆಳಗಿನೊಳು

೩

ದೀಪಗಳು ಒಳಬೆಳಕು ತೋರುತ್ತ ಬೆಳಗಿಸಲಿ
ದೀಪೋತ್ಸವವೆಮಗೆಲ್ಲ ಚಿರಕಾಂತಿ ಹರಡಲಿ
ಜಗದೊಳಗೆ ಹುದುಗಿರ್ಪ ಅಜ್ಞತೆಯ ನಳಿಸುತ್ತ
ಝುಗಝುಗಿಸಲೆದೆಯೊಳಗೆ ಶಿವಶಾಂತಿ ಹೊಂಬೆಳಗು



# ಶಿವನಪುಟ್ಟಿ

೧

ಹೃದಯಾಕಾಶದಿ ಏರಿಸುಪುಟ್ಟಿ
ಅದರೊಳ್ ಜ್ಞಾನಸುದೀಪವನಿಟ್ಟು
ಮುತ್ತಿದ ಕತ್ತಲೆ ಮೊತ್ತವನಟ್ಟಿ
ಸುತ್ತುತ ಬರುತಿಹ ಗಾಳಿಯಕಟ್ಟಿ

೨

ಬಂಧುರ ಸತ್ಯದ ಸ್ತಂಭವನೂರಿ
ಸುಂದರ ಬಕುತಿಯ ದಾರವ ತೂರಿ
ಅಷ್ಟಮದಂಗಳ ದಾರಿಯ ಮೀರಿ
ಆತ್ಮಾನಂದದ ಸೊಗವನು ತೋರಿ

೩

ನಭದಲಿ ಬೆಳಗಲಿ ಚಿನ್ಮಯ ಕಿರಣ
ತುಂಬಲಿ ಪುಟ್ಟಿಯು ದೇವರ ಸ್ಮರಣ
ಆಗಲಿ ಜನನದ ಮರಣದ ಹರಣ
ಇಂತೇರಿಸು ಶಿವಪುಟ್ಟಿಯ ಜಾಣ

-+++++++-

# ಇದಾವುದು ?

೧

ಎದೆಯ ಹೊದರಿನಲ್ಲಿ ಬೆರೆದ
ಪದುಳದಿಂದ ಸಲಹಿ ಪೊರೆದ
ಹಾಲುಹಕ್ಕಿಯೊಂದು ಇಂದು
ಕೂಗುತಿರುವದು
ಬಾಳೆ, ಸೇಬು ತಿಂದು ಮತ್ತೆ
ಕೂಗುತಿರುವದು

೨

ದಿನಕೆ ದಿನಕೆ ರೆಕ್ಕೆ ಬಲಿತು
ಹಾರಿಹೋಪ ಬಯಕೆ ಮೊಳೆತು
ತಿಂದು ತಿಂದು ತೇಗಿ ತಾನು
ಸೊಕ್ಕುತಿರುವದು
ಮದವ ಮುರಿದು ಹಾರದಿರಲು
ಏನುಮಾಡಲೈ

೩

ಹಕ್ಕಿ ಹೆಸರು ಹಂಸ ಪಿಕವು
ಗುಬ್ಬೆ ಗೂಬೆ ನವಿಲು ಶುಕವು
ಇದುವೆ ಅಲ್ಲ ರೆಕ್ಕೆಯಿಲ್ಲ
ಹಾರುತಿರುವದು
ಸರ್ವಜನರ ಎದೆಯೊಳಿರುವ
ದೇನುಪೇಳ್ವೆಯಾ?

-+++-

# ಅಮೃತಬಿಂದು

೧

ಕ್ರಾಂತಿ ಕಹಳೆಯನೂದು
ಶಾಂತಿ ತಪವನು ಮಾಡು
ಭ್ರಾಂತಿ ಮೋಹವದೂಡು
ನಿರತಿ ಗಂಧವ ತೀಡು

೨

ಶರಣರನು ಕೊಂಡಾಡು
ಭಕುತಿಯೊಳು ನಲಿದಾಡು
ಆನಂದ ಜಲಧಿಯೊಳು
ಮುಳುಗಿ ನೀನಮರನಾಗು

೩

ಸತ್ಯ ಕಂಬವನೂರು
ನಿತ್ಯ ಸುಖವನು ಕೋರು
ಮುಕುತಿಯಟ್ಟವನೇರು
ದೇವನಡಿಯೊಳು ಸೇರು



# ಎಲ್ಲಿ ಹೋದೆ ತಂದೆ ?

೧

ಎಲ್ಲಿ ಹೋದೆ ತಂದೆ ನೀನು
ಹುಟ್ಟಿಸೆನ್ನ ಎಲ್ಲಿ ಹೋದೆ
ದಾರಿತೋರಿ ಬುದ್ಧಿ ಹೇಳಿ
ಮಮತೆಯಿಂದ ಮುದವ ಮಾಡಿ
ಅಪ್ಪಿಕೊಂಡು ಸಲಹದೆನ್ನ
ಬಿಟ್ಟುಪೋದೆಯಾ ?

೨

ಕಣ್ಣು ಕಾಣದಿರುವ ಕುರುಡ
ನಿಕರಕೆಲ್ಲ ಜ್ಞಾನನೇತ್ರ
ವಿತ್ತು ಧನ್ಯಮಾಡಿ ಹೋದೆ
ಜ್ಞಾನ ಸೂರ್ಯನೆ
ತಂದೆ ಅಲ್ಲವೇನು ನೀನು
ಎಲ್ಲಿ ಪೋದೆಯೊ?

೩

ಹುಟ್ಟಿದೊಂದು ವರುಷಕೆನ್ನ
ಬಿಟ್ಟು ದೇವನಲ್ಲಿ ಬೆರೆದೆ
ಪೂರ್ಣಕಣ್ಣು ಬರುವತನಕ
ಇರದೆ ಹೋದೆಯಾ?
ಮರಳಿ ಜನುಮ ತಾಳ್ದು ಬರುವೆ
ನೆಂದು ಪೇಳ್ದೆಯಾ?

೪

ಆವಪರಿಯಲೆಂತು ಒರುವಿ
ಯೆಂಬುದನ್ನು ನೋಡುತಿರುವೆ
ಬೇಗಬಾರೋ ಎನ್ನ ಪಿತನೆ
ಮನೋನಿಲಯಕೆ
ಜೀವಜ್ಯೋತಿ "ಗುರುಕುಮಾರ"
ಕಾಣಬಾರದೇ?



# ಅಮರವಾಣಿ

ಭಾಮಿನಿ ಷಟ್ಪದಿ

೧

ಅಮರವಾಣಿಯು ಬೆಳೆದುಬಾಳಲಿ
ಸುಮನಲೋಕದ ಗಾನ ಸುರುಹಲಿ
ವಿಮಲ ಹೃದಯದ ವೀಣೆಯೊಳು ತಾಕೂಡಿ ಒಂದಾಗಿ
ತ್ರಿಮಲ ಕಳೆಯುತ ಸುಖವ ನೀಡುತ
ಅಮಲಜ್ಞಾನದ ಪ್ರಭೆಯ ತೋರುತ
ಅಮರಗಾನವ ಸತತಹಾಡಲಿ ಮಧ್ಯನಿಲ್ಲದಲೆ

೨

ಅಮರವಾಣಿಯು ಶಾಂತಿ ಕಾಂತಿಯ
ಅಮರ ನೀತಿಯ ಸತ್ಯಭಕ್ತಿಯ
ಅಮರ ಕಾವ್ಯವ ನೀಡಿ ಜೀವನ್ಮುಕ್ತಮಾಡುವದು
ಅಮರವಾಣಿಯ ಮಧುರ ಧ್ವನಿಯು
ಅಮರವಾಗಲಿ ಪ್ರತಿಭೆ ಬೆಳಗಲಿ
ಅಮರನಾಥನ ಭಕ್ತಿಯಿಂದಲಿ ಮುನ್ನ ಬೇಡುವೆನು



# ಸಾವಧಾನ

## ಭಾಮಿನಿ ಷಟ್ಪದಿ

೧

ಸಾವಧಾನದಿ ಕಾರ್ಯ ಮಾಳ್ಪಡೆ
ಆವರಿಸುವವು ಶಿಷ್ಟ ಗುಣಗಳು
ಭಾವನಾಶಕ್ತಿಯದು ತಾ ಬಲಿಯುವದು ಬಲುಬೇಗ
ಸಾವಧಾನದಿ ಕಾರ್ಯ ಮಾಡುತ
ಭೂವಿನುತ ನಾದಜ್ಜ ಗಾಂಧಿಯು
ಸಾವಧಾನದಿ ಮಾಡಿ ಬೆಳೆಸಿರಿ ಕೀರ್ತಿಲತೆಯನ್ನು

೨

ಸಾವಧಾನದಿ ಶಕ್ತಿ ಬರುವದು
ಸಾವಧಾನದಿ ಬುದ್ಧಿ ವೃದ್ಧಿಯು
ಸಾವಧಾನದಿ ಧೈರ್ಯ ತೇಜಗಳೆಲ್ಲ ದೊರೆಯುವದೈ
ಸಾವಧಾನದಿ ಕಾರ್ಯ ಮಾಡುವ
ಸಾವಧಾನದ ಒಡೆಯರಿಗೆ ನಾ
ಸಾವಧಾನದಿ ಮಾಡುವೆನು ಸುಸ್ವಾಗತವನು ಮುದದಿ



# ನಿಶೆಗೆ

೧

ನಿಶೆಯೇ ನಿಶೆಯೇ ಬರುತಿಹೆ ಏತಕೆ ?
ಯತಿಗಳನಾಸೆಯ ಬಲೆಯೊಳು ಸಿಲುಕಿಸಿ
ಜಪಮಾಲಿಕೆಯನು ಬೇಗನೆ ಹರಿಯಿಸಿ
ಘಾಸಿಯಮಾಡಲು ಬರುತಿಹೆ ಹೇಸಿ

೨

ನಿನ್ನಾವರಣವ ನೋಡಿದ ಜಣದೊಳು
ಬರುವವು ಹುಲಿಗಳು ಕರಡಿ ಸಮೂಹವು
ಕೂಗುತ ಚೀರುತ ಭೀಕರ ಧ್ವನಿಯಿಂ
ತಿನ್ನಲು ಹವಣಿಕೆ ಹಾಕುತಲಿರುವವು

೩

ನಿಶೆಯೇ ನೀಬರೆ ದೇಹವು ನಡಗುತ
ಲಿರುವದು ಚೋರರು ಬಂದರೆ ಗಳಿಸಿದ
ಧನವನ್ನಪಹರಿಸೊಯ್ಯುವರೆನ್ನುವ
ಭಯವದು ತುಂಬಿದೆ ಶಸ್ತ್ರವನೀಡೈ

೪

ಉಷೆಯೊಳು ಇರುವದು ಒಂದೇ ಕಣ್ಣು
ನಿಶೆತಾ ಮುಚ್ಚಲು ಸಾವಿರ ಕಣ್ಣು
ಹಿರಿಯರು ಪೇಳ್ವರು ನಿನ್ನಯ ಬಣ್ಣ
ಸಾಧಕವೃಂದವು ತೆಗಳ್ವುವದು ನಿನ್ನ

೫

ಅಂತೆಯೆ ಶರಣರು ನಿನ್ನಯಕತ್ತಲೆ
ಮೊತ್ತವನೊತ್ತಲು ಧ್ಯಾನದ ದೀಪವ
ಹಚ್ಚುತ ಎಚ್ಚರಗೊಳ್ಳುತ ಸತ್ಯದ
ಬೆಳಕಿನ ಹಾದಿಯ ಹಿಡಿಯುತಪೋದರು



# ಮಟ್ಟೆ ಹೊಡೆಯುವವಗೆ

೧

ಮಟ್ಟೆ ಹೊಡೆಯೋನೀನು ಇಂತು
ಜ್ಞಾನಕರ್ಮ ಎತ್ತುಗಳಿಗೆ
ಧ್ಯಾನವೆಂಬ ನೊಗವಹಾಕಿ
ಮಟ್ಟೆ ಹೊಡೆಯೋ
ಅದಕ್ಕೆ ಗಟ್ಟಿ ಮನದ ಮಿಣಿಯ
ನಿಟ್ಟುಕೊಳ್ಳುನೀ

೨

ಹೊಡೆಯೊ ಹೊಡೆಯೋ ಸತ್ಯವೆಂಬ
ಬಾರುಕೋಲಿನಿಂದ ಸದೆಯೊ
ಭಕ್ತಿ ಹಗ್ಗ ಕಟ್ಟಿ
ಯುಕ್ತಿಯಿಂದತಟ್ಟಿ
ಬರುವ ಹಲವು ಕ್ಲೇಶಗಳನು
ಭರದಿ ಕುಟ್ಟಿ ಹೊಡಿಯೋ

೩

ಶಕ್ತಿಯನ್ನು ಹೊರಗೆ ಚಿಮ್ಮು
ನಶಿಸುವವರ ಬೇಗ ಗುಮ್ಮು
ಕೇಕೆಹಾಕು ಹುರುಪಿನಿಂದ
ಹೊಡೆಯೋಮಟ್ಟೆಯ
ಹಾಡಹಾಡು ಶುದ್ಧ ಸಿದ್ಧ
ಪ್ರಬುದ್ಧರಾತ್ಮರ

೪

ಮಬ್ಬು ತಾನು ಮುತ್ತುತಿರಲಿ
ರಜನಿರಾಜ್ಯ ಬರುತಲಿರಲಿ
ಪಕ್ಷಿಪಶುಸಮೂಹವೀಗ
ಮನೆಯು ಸೇರಲಿ
ಭಾವಿ ಕೊಳೆಯು ಕಳೆಯು ತನಕ
ಹೊಡಿಯೋ ಮಟ್ಟೆಯು

೫

ಸಾಕುಮಾಡು ಹೇಳುತಿರಲಿ
ಬಂದು ಅವರು ಕರೆಯುತಿರಲಿ
ನೊಂದುಕೊಂಡು ಹೋಗುತಿರಲಿ
ಚಿಂತೆ ಬೇಡಲೈ
ಬಾಳಮೋಹ ದೂಡು ಭವದ
ತೃಷ್ಣೆ ಬತ್ತಲಿ

೬

ನಿಶೆಯು ಕಳೆದು ಉಷೆಯು ಬರಲಿ
ರವಿಯ ಪ್ರಖರ ಕಿರಣ ನಿಕರ
ಬಂದು ಜೀವ ಕುಸುಮವನ್ನು
ಮ್ಲಾನಿಸುತ್ತಿರೆ
ಧೈರ್ಯಬಿಡದೆ ಶಾಂತಿ ಜಲವ
ಸಿಂಚಿಸುತ್ತಿರು

ಹೊಡೆಯೋ ಮಟ್ಟಿ ಇಂತು ಸುಮತಿ
ಸಲಿಲ ಸೆಲೆಯು ಒಡೆವವರೆಗೆ
ಸಿಹಿಯ ನೀರು ಬರದೆ ಇರಲು
ನಾನು ಎಂಬುದಂ
ನ್ನಳಿದ ಜೋರಿಯಂತ್ರವನ್ನು
ಹಚ್ಚಿ ಮತ್ತೆ ಹೊಡೆದು ಸ್ವಚ್ಛ
ಮಾಡಿ ಹೃದಯ ಭಾವಿ ತೋಳಿದು
ಮುಕ್ತನಾಗುನೀ

# ಮೌನಂ ಸರ್ವಾರ್ಥ ಸಾಧನಂ

೧

ಮೌನವಿರೆ ಸುಖವುಂಟು
ಬಲುನುಡಿದು ಕಾಲ್ಗಳೆವ
ಬಾಳದುವೆ ಏತರದು ?
ನುಡಿಯಲ್ಲಿ ಮಿತಿಯುಂಟು
ಅತಿಯಂಡ ಜೀವಿಗಳು
ಬದುಕರದು ಸಟೆಯಲ್ಲ
ಬದುಕಿದರೆ ಆ ಬದುಕು
ಎಂತಹದು ಬಲುಮಿಡುಕು
ಕೊನೆಗದುವೆ ಅತಿಕೆಡುಕು
ಬಹುದಿನದಿ ಗಳಿಸಿರ್ಪ
ರತ್ನ ವೈಢೂರ್ಯಗಳ
ನೋಡಿದರೇಂ ಬರ್ಪುದೈ ?

೨

ಮೌನಿಯಿರೆ ಹುಚ್ಚೆಂದು
ಎಸೆಯುವರು ಕಲ್ಲನ್ನು
ಎಸೆದರೂ ಸುಮ್ಮನಿರು
ಒಗೆವವಗೆ ಬೇರೊಬ್ಬ
ಒಗೆವವನು ಇರನೆ ?
ಒಗೆವವಗೆ ನೀ ಒಗೆದು
ಮತ್ತಿಷ್ಟು ತಡವಿದರೆ

ಮದ್ಯವನು ಕುಡಿಸಿರ್ಪ
ಮಂಗನಂತಾಗುವನು
ಅನಲಕ್ಕೆ ಅರ್ಘ್ಯವನು
ಹಾಕಿದರೆ ಹೆಚ್ಚದಲೆ
ಬಿಡುವದೇನು ?

೩

ಮೌನವಿರೆ ಮುಚ್ಚದಿರು
ಒಳಗಣ್ಣು, ಮುಚ್ಚಿದರೆ
ಕಾದಿರ್ಪ ಭರ್ಚಿಯಿಂ
ಚುರ್ಚಿರ್ಪ ತೆರನಂತೆ
ಆಗುವದು ನಿಜವಂತೆ
ಕವಿ ಕಾಳಿದಾಸತಾ
ಹಾಡಿದನು ಸತ್ಯಕ್ಕೆ
ಮಿತಿಮಾತು ಬೇಕೆಂದು

# ಆಹ್ವಾನ

೧

ಬಾಗಿಲವ ತೆರೆದಿರುವೆ ಬಾಬೇಗ ಓ ಗುರುವೆ
ದಾರಿಯನು ನೋಡುತ್ತ ಕುಳಿತಿರುವೆ ಬಾ
ನಿನಗಾಗಿ ಕಟ್ಟಿರುವೆ ಸುಂದರದ ಮಂಟಪವ
ಚಿತ್ರದಿಂ ಶೋಭೆಯನು ಮಾಡಿರುವೆ ಬಾ

೨

ಆಸನವ ಹಾಸಿರುವೆ ಗಂಧವನು ತೇದಿರುವೆ
ಪತ್ರಿ ಪುಷ್ಪಗಳನೆತ್ತಿರುವೆ ಬಾ ಬಾ
ನಿರ್ಮಲದ ಹೃದಯದಿಂ ಸೇವೆಯನು ಮಾಡಿರುವೆ
ಭಕ್ತಿಯಿಂ ಕೈಮುಗಿದು ಬೇಡುವೆನು ಬಾ

೩

ಸಿಂಹಾಸನಾಶೀನ ನಾಗುತ್ತ ಪಾವನವ
ಗೈಯುತ್ತ ಜಲವನ್ನು ಸಿಂಚಿಸುತ ಬಾ
ಹೃದಯ ಮಂಟಪದೆನ್ನ ಚಿಚ್ಚರಣ ಕಿರಣಗಳ
ಹರಡುತ್ತ ಕತ್ತಲೆಯ ನಶಿಸುತ್ತ ಬಾ ಬಾ

## ಸಮರ್ಪಣ

೧

ಒಪ್ಪಿರಲಿ ತಪ್ಪಿರಲಿ
ಸುಖವಿರಲಿ ಶೋಕವಿರೆ
ನಿಂದಿಸಲಿ ಬಂಧಿಸಲಿ
ಪ್ರೀತಿಸಲಿ ದ್ವೇಷಿಸಲಿ
ಮಿತ್ರನಿರೆ ಶತ್ರುವಿರೆ
ಹಿರಿಯರಾದವರು ತಾವ್
ಹಿಂದಕ್ಕೆ ಜಗ್ಗುತಿರೆ
ಎಲ್ಲವೂ ನಿನ್ನದೈ

೨

ಮಾನಾಪಮಾನವಿರೆ
ದೇವನಲಿ ಧ್ಯಾನವಿರೆ
ಶಕ್ತಿಯಿರೆ ಯುಕ್ತಿಯಿರೆ
ಸಟೆಯಿರಲಿ ದಿಟವಿರಲಿ
ಪಾಪವಿರೆ ಪುಣ್ಯವಿರೆ
ಕೋಪವಿರೆ ತಾಪವಿರೆ
ಹೃದ್ಭೂಮಿಯೊಳೆಲ್ಲವೂ
ವಾಸಿಸಲಿನಿನಗರ್ಪಿತೈ

# ವಿಜಯಗೀತೆ

೧

ವಿಜಯವಾಗಲಿ ನಮ್ಮ ವೀರ ಭಾರತನಾಡು
ಸುಜನ ಸಂಕುಲವನ್ನು ಪೆತ್ತು ಪೊರೆದಿಹನಾಡು
ಕುಜನಕೂಟಕು ನಯದಿ ನೀತಿ ಪೇಳಿದ ನಾಡು
ಭಜಕರಿಂದಲಿ ತಾನು ಭಜಿಸಿಕೊಂಡಿಹನಾಡು

೨

ಪರದಾಸ್ಯದಲಿತಾನು ಘೋರಕಷ್ಟದಿ ಬಳಲಿ
ಶೂರತನದಲಿ ಕಾದಿ ವಿಜಯ ಪಡೆಯಿತು ಇಂದು
ವೀರಮಾತೆಯ ಕುವರರೆಲ್ಲರೊಂದಾಗಿನ್ನು
ಭಾರತಾಂಬೆಯ ಸೇವೆ ಭರದಿ ಮಾಡಲು ಬನ್ನಿ

೩

ಸ್ವಾತಂತ್ರ್ಯ ಪಡೆಯಲ್ಕೆ ಗಾಂಧಿ ಮಹಾತ್ಮನೆ ನೀನು
ಸ್ವಾತಂತ್ರ್ಯ ಪಡೆಯಲ್ಕೆ ನೆಹರು ವೀರನೆ ನೀನು
ಸ್ವಾತಂತ್ರ್ಯಕಾಗಿಯೇ ಇತ್ತು ತನುಮನಧನಂಗಳನು
ಶಾಂತದಾತರೆ ನಿಮಗೆ ನಮಿಸುವೆವು ನಾವೀಗ

೪

ವೀರರಾತ್ಮಗಳಿಂದು ತೃಪ್ತಿಪೊಂದುವ ದಿನವು
ಭಾರತೀಯರ ಕೈಗೆ ರಾಜ್ಯ ದೊರೆಯುವ ದಿನವು
ವೀರತನವನು ಪೊಂದಿ ದೇಶವಾಳುವ ದಿನವು
ಭಾರತೀಯರೆ ಬನ್ನಿ ಹರುಷದಲಿ ಮುಂದಿನ್ನು

೫

ವೀರಕೇಸರಿ ಭೋಸನನ್ನು ಪಡೆದಿಹತಾಯೆ
ಭೂರಿ ಸದ್ಗುಣಗಳನು ಪಡೆದು ಶೋಭಿಸತಾಯೆ
ವೀರರಹ ಧೀರರಹ ನಿನ್ನ ಮಕ್ಕಳಿಗಿನ್ನು
ಭೂರಿ ಸಂತಸದಿಂದ ಕರುಣಿಸೌ ಓ ತಾಯೆ !

# ಮರೆಯಾದ ಮಹಾತ್ಮ

೧

ಮುಳುಗಿದನು ಮುಳುಗಿದನು ಭಾರತದ ಚಿತ್ಸೂರ್ಯ
ಮುಳುಗಿದನು ಮುಳುಗಿದನು ಸತ್ಯಕಿರಣದ ತೂರ್ಯ
ಬೆಳಗಿಸೋದನು ಬಾಪು ವ್ರತವ ಬಿಡದಲೆ ತಾನು
ಬೆಳಗುವೆವು ಬೆಳಗುವೆವು ಭಕುತಿಯಿಂದಾರುತಿಯ

೨

ಶಾಂತಮೂರ್ತಿಯ ನಾವು ಕಳೆದುಕೊಂಡೆವು ಇಂದು
ಶಾಂತಿಯಿಲ್ಲದೆ ನಾವು ಅಂಧರಾದೆವು ಮುಂದು
ಶಾಂತಿ ಪಥವನು ತೋರಿ ನಡಿಸುವರು ಆರಿನ್ನು
ಶಾಂತಮೂರ್ತಿಯೆ ನಿನಗೆ ಶಾಂತಿ ನೀಡಲಿದೇವ

೩

ಮರೆಯಾದೆ ಹರಿಯಾಗಿ ಗಾಂಧಿ ಮಹಾತ್ಮನೆ ನೀನು
ಮರವೆಯಾ ಮನೆಯೊಳಗೆ ಬೀಳುವದು ಜಗವಿನ್ನು
ಮರವೆ ಬಿಡಿಸುತಲಿನ್ನು ಶಾಂತಿ ಸಮತೆಯ ಪಾಠ
ಅರುಹುವರು ಜಗದೊಳಗೆ ಆರಿಹರು ಜಗದಜ್ಜ !

# ಗುರುಕುಮಾರ

ಶಿವಯೋಗಿಯೋ ನೀಯೋಗಿ ಮಹಾಮೂರ್ತಿ ಕುಮಾರಾ
ಶಿವಯೋಗಮಣಿ ತ್ಯಾಗಖಣಿ ವೀರಸುಧೀರಾ

೧

ಸದಾಶಿವಾತ್ಮ ನಾಮಾ ವರಭಾಸುರಧಾಮಾ
ಆಧ್ಯಾತ್ಮ ಸಾರ್ವಭೌಮಾ ಶಿವಯೋಗಿ ಲಲಾಮಾ
ಆಗಲಿದೆ ನೀನೆಮ್ಮನು ನೀ ಶಕ್ತಿಯ ಸೀಮಾ

೨

ಧೈರ್ಯಸುಮೇರು ಕ್ರೂರ ಮಾರಸಂಹರ ವೀರ
ಶಾಂಭವ ಜ್ಞಾನ ಮಹಾಬೋಧವರ ವಿಖ್ಯಾತ
ಭವತ್ಯಾಗಿ ಲಿಂಗಭೋಗಿ ಜಂಗಮ ಪ್ರೇಮಿನೀ

೧

ಶ್ರೀ ಶಾಂತಮೂರ್ತಿ ಯೋಗಕೀರ್ತಿ ಜ್ಯೋತಿ ಇದಯ್ಯ
ಶ್ರೀ ವೀರಶೈವ ಮಹಾಮತ ಪಾಲಕನೇತಾ
ಸುವಿರಾಗಿ ಲಿಂಗಾಂಗಿ ನೀ ಶ್ರೀ ಸುಕುಮಾರಾ

# ಮಹಂತೇಶಗೀತೆ

ಸ್ಮರಿಸುವೆ ವೀರ ಶ್ರೀ ಮಹಂತೇಶ
ಮರೆಯದೆ ಎಮ್ಮಯ ಪಾಲಿಸು ಗುರುವೆ ॥ಪ॥

೧

ಅರಿಷಡ್ವರ್ಗವ ಜಯಿಸಿದ ತ್ಯಾಗಿ
ನಿರುತದಿ ಲಿಂಗವ ಪೂಜಿಪಯೋಗಿ

೨

ಭಕುತರಿಗೆಲ್ಲ ಭಕುತಿಯ ರೀತಿ
ಯುಕುತಿಯಿಂದರುಹಿದ ಭಕ್ತರಮೂರ್ತಿ

೩

ಯೋಗದ ಪೀಠವು ಉಳಿಯಲಿ ಎಂದು
ಯೋಗಸುಮಂದಿರ ರಚಿಸಿದಿ ಬಂದು

೪

ಯೋಗದಿ ನಿಪುಣನೆ ಚಿತ್ತರಗೀಶ
ಬಾಗುವೆ ಪಾದಕೆ ಭಕ್ತಿಯ ಕೋಶ

೬

ನಿನ್ನಯ ನಾಮವ ನೆನೆಯುತ ಮುದದಿ
ಬನ್ನವ ಕಳೆಯಲು ಬೇಡುವೆ ಜವದಿ

# ಸ್ತೋತ್ರ

ಶ್ರೀ ಗುರುನಾಥಾ ಯೋಗವಿಖ್ಯಾತಾ
ಬಾಗುವೆ ಚರಣಕೆ ಭೋ ಭೋ ||ಪ||

೧

ಮಾಯದ ಮದವನು ಮುರಿದು
ಧ್ಯೇಯವ ಸಾಧಿಸಿ ಮುದದಿ
ಮಾಯಾ ವಿರಹಿತನಾಗಿ
ಮೆರೆದಿಹ ಯತಿವರ ನೀನು

೨

ಜೀವದ ಗುಣಗಳ ನಳಿಸಿ
ದೇವರ ಧ್ಯಾನವ ಸ್ಮರಿಸಿ
ದೇವನೊಳೈಕ್ಯವಪೊಂದಿ
ದಾನಂದ ಮೂರ್ತಿಯೋ ನೀ

೩

ಯೋಗಸುಮಂದಿರ ರಚಿಸಿ
ಯೋಗದ ತತ್ವವ ತಿಳಿಸಿ
ಯೋಗಾನಂದವ ಪಡೆದಿಹ
ಯತಿವರ ಶ್ರೀ ಸುಕುಮಾರ

# ಮಂಗಲಗೀತೆ

ಮಂಗಲಂ ಭವಾರಣ್ಯದಾವ ॥ ಪ ॥

೧

ನಿತ್ಯಮುಕ್ತನೆ ಮಹಾಮೂರ್ತಿ ದಿವ್ಯಾತ್ಮ
ಸತ್ಯಪ್ರಬುದ್ಧಶುದ್ಧಸಿದ್ಧ ಮಹಾತ್ಮ

೨

ವೀರಶೈವಾಚಾರ ಸಾರ ವಿಜ್ಞಾತ
ಮಾರಸಂಹರ ಧೀರಶೂರ ಪ್ರಖ್ಯಾತ

೩

ಜ್ಞಾನನೇತ್ರನೆ ಮಹಾಂತೇಶ ಮಹೇಶ
ಧ್ಯಾನತಲ್ಲೀನ ಸ್ತೋತ್ರ ಪಾತ್ರ ಚಿತ್ಕೋಶ

# ಕವಿ

೧

ಕಲ್ಲಿನೆದೆಯ ಕರಗಿಸುವನು
ದೇವನಡಿಯ ತೋರಿಸುವನು
"ತತ್ವಮಸಿ"ಯ ತತ್ವವನ್ನು
ತಿಳುಹಿಕೊಡುವನು

ಭಾವಪುಷ್ಪವರಳಿದಾಗ
ಭಯವು ಬಂದು ಮುತ್ತಿದಾಗ
ಸುಖದ ದುಃಖ ಸಮಯದಲ್ಲಿ
ಹಾಡಿಬಿಡುವನು

೨

ನೀರಿನಲ್ಲಿ ಭೂಮಿಯಲ್ಲಿ
ಅನಿಲದಲ್ಲಿ ಅನಲದಲ್ಲಿ
ಶೈಲ ಶಿಖರದಲ್ಲಿ ತಾನು
ಹೋಗತಕ್ಕವ

ಚಂದ್ರನಂತೆ ತಂಪುತಾಳ್ದು
ಸೂರ್ಯನಂತೆ ದೀಪ್ತಿ ಪಡೆದು
ಸಲಿಲದಂತೆ ಸರಸನಾಗಿ
ಮೆರೆಯತಕ್ಕವ

೨

ಗಗನವವಗೆ ಒಹಳ ಕಿರಿದು

ಸಘನವನವು ಮಿಗಿಲುಚಂದ

ಮೂರುಲೋಕ ತುಂಬ ಇವನ

ಮನೆಗಳಿರುವವು

ಅಳಿವುದೊಮ್ಮೆ ಬ್ರಹ್ಮಸೃಷ್ಟಿ

ಉಳಿವುದಂತ್ಯ ಕವಿಯ ಸೃಷ್ಟಿ

ಕವಿಯ ದಯಾದೃಷ್ಟಿ ಪಡೆಯುವವರೆ

ಅಮರರು

# ರಾಷ್ಟ್ರಪಿತನಿಗೆ

ಭಾಮಿನಿ ಷಟ್ಪದಿ

೧

ಶಾಂತಮೂರ್ತಿಯೆ ಸತ್ಯವಂತನೆ
ಶಾಂತಿಯುಕ್ತ ವಿರಾಗ ಜಲಧಿಯೆ
ಅಂತರಂಗದಿ ಹರಿಯನೆನಹನುಬಿಡದೆ ಬಯಲಾದೆ
ಚಿಂತೆಯಲಿ ಮುಳುಗಿರ್ಪನಿನ್ನಯ
ಭ್ರಾಂತಿ ಎಂಬಾ ಹಿರಿಬಲೆಗೆ ಸಿಲು-
ಕಿಂತು ನಾನಾ ಯೋಚನೆ ಗೆಯ್ವುತಿಹುದು ಜಗವೆಲ್ಲ

೨

ಹೊಳೆವ ಚಂದ್ರಗೆ ರಾಹುವೆಂಬಾದು
ರುಳ ನೆನಿಸಿದಾ ಹಿರಿಯರಕ್ಕಸ
ಕಳೆಯ ಕಳೆಯುತ ಕಷ್ಟಕೊಡುತಲಿ ನುಂಗಿಬಿಡುವಂತೆ
ಕೊಲೆಯಪಾತಕಿ ಘೋಡ್ಸೆಯೆಂಬುವ
ಕೊಲೆಯ ಮಾಡಿದನಲ್ತೆ ಗಾಂಧಿಯ
ಬಲುಮಹಿಮನಾ ಶಾಂತಿಕೊಲೆಯಿಂ ಜಗವ ಪೀಡಿಸಿದ

೩

ನಿನ್ನ ಆತ್ಮಕೆ ಶಾಂತಿ ನೀಡಲಿ
ನಿನ್ನ ಕೀರ್ತಿಯು ಜಗದಿ ಹರಡಲಿ
ನಿನ್ನ ಹಾದಿಯ ಹಿಡಿಯಲೆಂದು ಬೇಡುವೆನು ಹರನನ್ನು
ಇನ್ನು ಅಳಿಯಲಿ ಜಾತಿ ಭೇದವು
ಮುನ್ನ ಬೆಳೆಯಲಿ ಒಂದೇ ಭಾವವು
ನಿನ್ನ ಧರ್ಮವು ಬಾಳಿ ಬದುಕಲಿ ರಾಷ್ಟ್ರನಾಯಕನೇ

# ಪ್ರೋತ್ಸಾಹ

ಬಳ್ಳಿಗಳು ಚಿಗುರೊಡೆದು
ಹೂಕಾಯಿ ಬಿಡಲಿಕ್ಕೆ
ನೀರೆರೆಯ ಬೇಕಲ್ಲವೆ ?

ಎಳೆಮಗುವು ಹಿರಿದಾಗಿ
ಬಲಶಾಲಿಯಾಗಲ್ಕೆ
ಪಾಲ್ಗುಡಿಸಬೇಕಲ್ಲವೆ ?

ಹುಲುಸಾದ ಕಾಳುಗಳ
ಬೆಳೆಯುತಿಹ ಹೊಲಗಳಿಗೆ
ಬಲವೀಯಬೇಕಲ್ಲವೆ ?

ಎಲ್ಲರನು ಒಯ್ಯುತಿಹ
ರೈಲು-ರಥ ಚಲಿಸಲ್ಕೆ
ಕಲ್ಲಿದ್ದಲ ಬೇಕಲ್ಲವೆ ?

ಹಸಿವೆಯನು ಹಿಂಗಿಸುವ
ರಸೋಗರ ಮಾಡಲ್ಕೆ
ಕಾಷ್ಟವದು ಬೇಕಲ್ಲವೆ ?

ಸಲೆ ನೆರಳು ಕೊಡುತಿರುವ
ಚಲು ಮನೆಯ ಕಟ್ಟಲ್ಕೆ
ಕಲ್ಲುಗಳು ಬೇಕಲ್ಲವೆ ?

ಜನರೊಳಗೆ ಜಾಣನೆಂ-
ದೆನಿಸಲ್ಕೆ ಗುರುವಿನಾ
ಉಪದೇಶ ಬೇಕಲ್ಲವೆ ?

ಪ್ರೋತ್ಸಾಹವಿಲ್ಲದಲೆ
ಪಾಸಿಸುವ ಆ ಬಾಳು
ರಸವಿರದ ಪಣ್ಣಲ್ಲವೆ ?

## ಮೋಲ್ಮಠವ ಮುಟ್ಟಿಸೈ

೧

ಕತ್ತಲೆಯು ಮುತ್ತುತಿದೆ
ಮಳೆ ಹನಿಯು ಸಿಡಿಯುತಿದೆ
ದಾರಿಯನು ಹಿಡಿದಿರುವೆ
ಮೋಲ್ಮಠವ ಮುಟ್ಟಲಿಕೆ
ಮೇಘಗಳ ಗರ್ಜನೆಯು
ಭೋರ್ಗರೆದು ಕೇಳುತಿದೆ
ಕಣ್ಣನ್ನು ಕೋಲ್ಮಿಂಚು
ಕೋರೈಸಿ ಮುಚ್ಚುತಿದೆ

೨

ಕಾಡುನರಿ ನಿಕರಗಳ
ಗುದ್ದಾಟ ದುರುಳಾಟ
ನಾಗಗಳ ಓಡಾಟ
ಗೂಬೆಗಳ ಕೂಗಾಟ
ಕೋಣಗಳ ಕಾದಾಟ
ಭೂತಗಳ ತಿರುಗಾಟ
ನಡೆದಿಹವು ಸುತ್ತೆಲ್ಲ
ಕಿರುಚಾಟದಬ್ಬರಾಟ

೩

ಎಂತು ನಾ ಸಾಗಿಸಲಿ
ದಾರಿಯನು ಓ ತಂದೆ
ಇಂತಿರುವ ಕಷ್ಟಗಳ
ಪರಿಹರಿಸಲಾನೆಂದು ?
ಓ ಗುರುವೆ ನಾನೀಗ
ಬೇಡುವೆನು ನಿನ್ನಲ್ಲಿ
ಜ್ಞಾನದೀಪವ ನೀಡಿ
ಮೇಲ್ಮತವ ಮುಟ್ಟಿಸೈ

# ಬಿಡುವನೇಂ ?

೧

ಪಕ್ಷಿಯನು ಹಿಡಿತಂದು
ಪಂಜರದೊಳಿಟ್ಟರೇಂ
ಹಾರುವದು ಹೋದೀತೆ ?

೨

ಹಸಿವೆಯಿಂ ಬಳಲುತಿಹ
ಭಿಕ್ಷುಕಗೆ ನೀಡದಿರೆ
ಭಕ್ಷಿಪುದು ಬಿಡುವನೇಂ ?

೩

ಕಟ್ಟಡವ ಕಟ್ಟುವಗೆ
ಇಟ್ಟಿಗೆಯು ಸಿಗದಿರಲು
ಕಟ್ಟುವದು ಬಿಡುವನೇಂ ?

೪

ಕೃಷಿಕನಿಗೆ ಬಿತ್ತಲ್ಕೆ
ಹೊಸಬಿತ್ತು ದೊರೆಯದಿರೆ
ಹಸಹೊಲವ ಬಿಡುವನೇಂ ?

೫

ಸೌರಭವ ಸೂಸುತಿಹೆ
ಕುಸುಮಗಳ ನೆಸೆದೊಡೇಂ ?
ಸೌರಭವ ಬಿಡುವವೇಂ ?

೬

ಕದಳಿಯಾ ಹಣ್ಣುಗಳು
ಸಿಹಿಕೊಡುವವಲ್ಲದೆ
ಕಹಿಯನ್ನು ಕೊಡುವವೇಂ ?

೭

ನಿಡುತೊರೆಯು ಕಡಲವನು
ಕೂಡಲ್ಕೆ ಕಠಿಣವಿರೆ
ಕೂಡುವದು ಬಿಟ್ಟೀತೇ ?

೮

ಕಾರ್ಯವನು ಮಾಡುವವಗೆ
ಪ್ರೋತ್ಸಾಹ ನೀಡದಿರೆ
ಕಾರ್ಯವನು ಬಿಡುವನೇಂ ?

# ಸ್ತುತಿ ಪಂಚಕಂ

( ನಗಸ್ವರೂಪಿಣೀ ವೃತ್ತ )

೧

ಯತೀಂದ್ರ ವೃಂದ ಪೂಜಿತಂ
ಚರಾಗಭೋಗ ವರ್ಜಿತಂ
ಕೃತೇಶಭವ್ಯ ಮಂದಿರಂ
ಗಿರೀಶಯೋಗರಾಜಿತಂ
ಸುವೀರಶೈವರಕ್ಷಕಂ
ಸಧರ್ಮಬೋಧ ಶಿಕ್ಷಕಂ
ವಿರಾಟ್ಪುರಾಧಿನಾಯಕಂ
ಭಜಾಮಿ ಮುಕ್ತಿದಾಯಕಂ

೨

ವಿಚಾರಸಾರಪೂರಕಂ
ಸ್ವಭಕ್ತಶೋಕ ನಾಶಕಂ
ಭವಾದಿ ಮೂಲದಾಹಕಂ
ಯಮೀಶ ಸಂಘದೀಪಕಂ
ಅನಾಥವೃಂದ ಪೋಷಕಂ
ಮಹಾಪದಾಂ ನಿವಾರಕಂ
ವಿರಾಟ್ಪುರಾಧಿ ನಾಯಕಂ
ಭಜಾಮಿ ಮುಕ್ತಿದಾಯಕಂ

೩

ಚಿದಂಗಯೋಗಿ ಸಿದ್ಧಿದಂ
ಚಭಕ್ತಿಶಕ್ತಿ ಮುಕ್ತಿದಂ
ಶಿವಾನುರಾಗಿ ಯೋಗಿಶಂ
ಕರಾನುಭಾವ ಶಾಂತಿದಂ
ಕೃಪಾಕರಂ ಗುಣಾಕರಂ
ಪರೋಪಕಾರ ಸಾಗರಂ
ವಿರಾಟ್ಪುರಾಧಿ ನಾಯಕಂ
ನಮಾಮಿ ಭಕ್ತಿಪೂರ್ವಕಂ

೪

ನಿರಂಜನಂಚ ನಿರ್ಗುಣಂ
ಕುಪಾಪ ಪಂಕ ಶೋಷಣಂ
ವಿರಾಗ ಸತ್ಯ ಭೂಷಣಂ
ಚ ಷಟ್ಸ್ಥಲ ಸ್ವರೂಪಿಣಂ
ವಿರಕ್ತವೃಂದ ಶೇಖರಂ
ಹ್ಯನೀತಿ ವರ್ತ್ಮಭೀಕರಂ
ವಿರಾಟ್ಪುರಾಧಿ ನಾಯಕಂ
ನಮಾಮಿ ಮುಕ್ತಿದಾಯಕಂ

೫

ಸುಭಾವ ಭಕ್ತ ಭಾಸ್ಕರಂ
ಸುಶಾಂತಿ ಮುಕ್ತಿಮಂದಿರಂ
ಚರೇಶ್ವರಂ ಪರೇಶ್ವರಂ
ಸುಜಂಗಮೇಶ್ವರಂ ಗುರುಂ
ಫಲಪ್ರದಂ ಪ್ರಮೋದದಂ
ಚಿದಾತ್ಮಲಿಂಗಭೋಗಿನಂ
ಸದಾಶಿವಂಚ ಮತ್ಪ್ರಭುಂ
ಭಜೇ ಕುಮಾರ ಯೋಗಿನಂ

ಅನುಷ್ಟುಪ್ —

೨

ಭಾವಾತ್ಮಕಂ ಸುಹೃದ್ಯಂಚ
ಕುಮಾರಸ್ವಾಮಿ ಪ್ರೀತಯೇ !
ಸೇವಕೇನ ಮಹಾಂತೇನ
ರಚಿತಂ "ಸ್ತುತಿ ಪಂಚಕಂ"

೩

ಸ್ತುತಿ ಪಂಚಕ ಮೇತಚ್ಚ
ಸದ್‌ಭಕ್ತ್ಯಾ ಪ್ರಣಿಧಾನದಂ
ಯಃ ಪಠೇಲ್ಲಭತೇ ನಿತ್ಯಂ
ಸಸ್ವ ಸಿದ್ಧಿಸು ಸಂಪದಂ

# ಸ್ವಾತಂತ್ರ್ಯ

೧

ಒಹು ದಿನದ ಯತ್ನದಿಂ ದೊರೆತಿಹುದು ಸ್ವಾತಂತ್ರ್ಯ
ಸ್ವಾತಂತ್ರ್ಯ ಪ್ರಾಪ್ತಿಯೊಳಿರುತಿಹುದು ನಿಜಶಾಂತಿ
ಸ್ವಾತಂತ್ರ್ಯ ಗಳಿಸಿದೊಡೆ ಬೆಳಗುವದು ಶಿವಕಾಂತಿ
ಸ್ವಾತಂತ್ರ್ಯವೆಮಗೆಲ್ಲ ಕೊಡುತಿಹುದು ಧೈರ್ಯವನು

೨

ಸ್ವಾತಂತ್ರ್ಯ ದೊರೆತರೂ ನಡೆದಿಹುದು ಸುತ್ತೆಲ್ಲ
ಕಳ್ಳ ಸುಲಿಗೆಗಳಾ ಒಡಿದಾಟ ಕೊಲೆಯಾಟ
ಅನ್ನ ನೀರಿಲ್ಲದಲೆ ಮರಗುತ್ತ ಕೊರಗುತ್ತ
ಸಾಯುತಿದೆ ಜನಸಂಖ್ಯೆ ಗುಣಿತ ಗಣಿತವ ಮೀರಿ

೩

ಒಳಲುತಿಪ ಒಡಜನರಿಗಾಹಾರದಾನಂದ
ದೊರೆತಾಗ ನಿಜವಾದ ಸಂಪೂರ್ಣ ಸ್ವಾತಂತ್ರ್ಯ
ಓ! ತಂದೆ ಜಗದೀಶ ಎಚ್ಚರಿಸು ಜನಗಳನು
ಆತ್ಮಶಕ್ತಿಯನಿತ್ತು ಪಾಲಿಸೈ ಮುದದಿಂದ

# ಶಿವಯೋಗಮಂದಿರಂ

೧

ಹೃದಯವೇ ನಿಜನಿಲಯ ಶಿವಯೋಗಮಂದಿರಕೆ
ಜ್ಞಾನದಾ ನೇತ್ರವನು ತೆರೆದರದು ಕಾಣುವದು
ಎಲ್ಲಿದ್ದರೇನಂತೆ ಆ ಭವ್ಯ ಭವನವನು
ತೊರೆಯದಲೆ ಮರೆಯದಲೆ ಪೂಜಿಸಡೆ ಸೊಗಸಿಹುದು

೨

ಮಂದಿರವ ಸುತ್ತಲೂ ಸತ್ಯದಾಗೋಡೆಯನು
ಕಟ್ಟಿದೊಡೆ ಒಳಗಿರುವ ಶಿವಯೋಗ ದೊರಕುವದು
ಭಕುತಿಯಿಂ ಕೈಮುಗಿದು ಹಾಡಿದೊಡೆ ಬೇಡಿದೊಡೆ
ಹೃದಯದಾ ಮಂದಿರವು ಥಳಥಳನೆ ಹೊಳೆಯುವದು

೩

ಮುಸುಕಿರುವ ಅಜ್ಞಾನ ಭ್ರಮೆಯನ್ನು ದೂಡಿದೊಡೆ
ಶಿವಯೋಗದೊಳಗಿರುವ ಶಿವತೇಜ ಕಾಣುವದು
ಹೃದಯದೊಳು ಶಿವಜ್ಞಾನ ಶಿವಭಾವ ಒಲಿಸಿದೊಡೆ
ಶಿವಯೋಗ ಮಂದಿರವೆ ಹೃದಯ ತಾನಾಗುವದು

# ನಾವಿಕನನ್ನು ಕುರಿತು

೧

ಈ ಪುಟ್ಟನಾವೆಯಲಿ ತೇಲುತ್ತ ಹೊರಟಿಹೆನು ?
ಹತ್ತಿರದ ತೀರಕ್ಕೆ ತಲ್ಪಿಸೈ ತಂದೆ
ಜೀವನದ ಸಾಗರದಿ ಈಜಿ ನಾ ಸೋತಿರುವೆ
ದೇಹವದು ಹಣ್ಣಾಗಿ ಸಣ್ಣಾಗಿ ಹೋಗಿಹುದು

೨

ಹಗಲಿನಲಿ ಭಯವೀವ ಬಿರುಗಾಳಿ ಬೀಸುವದು
ರಾತ್ರಿಯೊಳು ಕತ್ತಲೆಯು ಪೊತ್ತವದು ಮುತ್ತುವದು
ನನ್ನಯೀ ದಾರಿಯೊಳು ಸಂಗಡಿಗರಾರಿರದೆ
ಒಳಲಿ ನಾನಿನ್ನನ್ನು ಬೇಡುತಿಹೆ ನಾವಿಕನೆ !

೩

ಈಸೆನಗೆ ಬಂದರೂ ಭಯತುಂಬಿ ಬೀಸಿಹುದು
ಅರ್ಭಟದಿ ಬರುತಿರುವ ತೆರೆಗಳಾ ಹೊಡೆತವನು
ನೋಡಿದೊಡೆ ದೇಹವದು ನಡುಗುತ್ತಲಿರುವದೈ
ಭಯದಿಂದ ದೂರಿರಿಸಿ ಧೈರ್ಯವನು ನೀಡಯ್ಯ

೪

ನೀನಿರದೆ ಜಗವೆಲ್ಲ ಬಾಳುವದು ದುರ್ಲಭವು
ನಿನ್ನೀ ಕರುಣೆಯನು ಬೇಡುವದು ಜನವೆಲ್ಲ
ದೀಪ್ತಿಯನು ಶಾಂತಿಯನು ನೀಡುತ್ತ ಮುದದಿಂದ
ಆ ತೀರ ಮುಟ್ಟಿಸೈ ಜೋಕೆಯಿಂ ನಾವೆಯನು

# ಸುಕುಮಾರನಿಗೆ

೧

ಹುಟ್ಟಿರುವ ಸುಕುಮಾರ
ಸುಖವಾಗಿ ಬಾಳುತ್ತ
ಬೆಳೆಯುತ್ತ ಬೆಳಗುತ್ತ
ಚಿರಕಾಂತಿ ನೀಡುತ್ತ
ಜನಮನದ ಪ್ರೇಮದಾ
ಸಾಗರದಿ ಮುಳುಗುತ್ತ
ಜವ್ವನದ ಸೌಂದರ್ಯ
ತೋರಿಸಲಿ ಮಾಧುರ್ಯ

೨

ಸುಕುಮಾರನಿಲ್ಲದಿರೆ
ಜನಕೆಲ್ಲ ಕಡುದುಃಖ
ಸುಕುಮಾರ ಮನೆಗೆಲ್ಲ
ಸುಖಸಾರ ಸಂಭಾರ
ಸುಕುಮಾರ ನಮಗೆಲ್ಲ
ಸನ್ಮಾರ್ಗಕಾಧಾರ
ಹೃನ್ಮೂರ್ತಿ ಸುಕುಮಾರ
ನಾ ಪ್ರಭೆಯು ರಂಜಿಸಲಿ .

ಅಡಿಯಿಡುತ ಸುಕುಮಾರ
ಪ್ರೌಢಿಮೆಯ ದಾರಿಯೊಳು
ಹೊಂಗಿರಣ ಹೊಂಬೆಳಕು
ಪಸರಿಸಲಿ ಸುತ್ತೆಲ್ಲ

ಎಚ್ಚರಿಸಿ ಕನ್ನಡದ
ಜನತೆಯನು ಧೈರ್ಯದಿಂ
ಸುಖಶಾಂತಿ ಬೀರುತ್ತ
ಹೃದ್ದೀಪ ಬೆಳಗಿಸಲಿ

# ಶಮೀ ಸಮರ್ಪಣ

೧

ಆಶೀರ್ವದಿಸು ಗುರುವೆ
ಬಾಗಿರುವೆ ಭಕ್ತಿಯಿಂ
ತೊಳೆದಿರುವೆ ಹೃದಯವನು
ಗಂಗೆಯಾ ಸಲಿಲದಿಂ
ಅರ್ಪಿಸುವೆ ಪನ್ನಿಯನು
ಸಂಪೂಜ್ಯ ಚರಣದೊಳು
ಸ್ವೀಕರಿಸು ಓ ತಂದೆ
ಮಮತೆಯಿಂ ನೋಡುತ್ತ

೨

ಎಡೆಬಿಡದೆ ಮುನ್ನುಗ್ಗಿ
ರಣಭೂಮಿಯೊಳುಕಾದಿ
ಕಡಿಯುತ್ತ ವೈರಿಗಳ
ದೂಡುತ್ತ ಕ್ಲೇಶಗಳ
ತುಳಿಯುತ್ತ ಧೂಳಿಯನು
ತಾಳುತ್ತ ಧೈರ್ಯವನು
ವಿಜಯವನು ಪಡೆಯಲ್ಕೆ
ಬೇಡುತಿಹೆ "ಶಸ್ತ್ರವನು"

೩

ವಿಜಯಕಾಗಿಯೆ ನಡೆದಿಹುದು
ಸುತ್ತೆಲ್ಲ ಯುದ್ಧ
ವಿಜಯದಿಂದಾತ್ಮಸಿದ್ಧಿ
ದೊರಕುವದು ಸಂಸಿದ್ಧಿ
ವಿಜಯವೇ ಜೀವನಕೆ
ನವಕಾಂತಿ ಸಮಶಾಂತಿ
ಯಾತ್ರಿಕಗೆ ಪಟ್ಟಣವು
ದೊರೆತರದು ಚಿಂತೆಯೇಂ ?

೪

ವಿಜಯ ಪಡೆಯದ ಮನುಜ
ಒಣಗಿರ್ಪ ಎಲೆಯಂತೆ
ಬತ್ತಿರುವ ಕೆರೆಯಂತೆ
ಒಡೆದ ಕನ್ನಡಿಯಂತೆ
ಅಪಜಯವೇ ದುಃಖಕ್ಕೆ
ಮೂಲಬೇರಲ್ಲವೆ ?
ವಿಜಯ ಪಡೆಯುವ ಮನುಜ
ರಸಭರಿತ ಪಣ್ಣಲ್ಲವೆ ?

೫

ಬಂಗಾರನೀಡಯ್ಯ
ಕಡುಬಡವನಾಗಿರುವೆ
ಬಂಗಾರ ದೊರೆಯದಿರೆ
ಶೃಂಗಾರವೆಂತಯ್ಯ
ಅಂತರ್ಯಾಮಿ ಓ ಗುರುವೆ
“ಸುಕುಮಾರ” ಚಿನ್ಮೂರ್ತಿ
ಸುಜ್ಞಾನ ಸುವರ್ಣವನು
ಬೇಡುತಿಹೆ ಹೃನ್ಮೂರ್ತಿ

# ಪ್ರೇರಣೆಗೆ

೧

ಪ್ರೇರಣೆಯೆ ! ಧಾರುಣಿಗೆ ಚೇತನವ ಕೊಡುತಿಹುದು
ಪಥಿಕಂಗೆ ದಾರಿಯನು ತೋರಿ ಸುಖ ನೀಡುವದು
ಪ್ರೇರಣೆಯ ಬಲದಿಂ ಸಾಗುವವು ಅಶ್ವಗಳು
ಪ್ರೇರಣೆಯೆ ದೀಪಕ್ಕೆ ನಿಜತೈಲವತ್ತಿ ?

೨

ಪ್ರೇರಣೆಯ ಬಲವಿರದ ಈ ಜೀವ ನಿರ್ಜೀವ
ದಿನಕರನು ತಾನಿರದ ನೀರಜದ ತೆರನಂತೆ
ಪ್ರೇರಣೆಯು ತುಂಬಿರುವ ಹೃದಯವದು ಹೊಮ್ಮುವದು
ಸ್ವರ್ಣ ಘಟದಂತೆ ಮೇಣ್ ಸೌಗಂಧ್ಯದಲರಂತೆ

೩

ಜಿಗಿದಿರುವ ಹಗ್ಗವನು ಕಲಿತನದಿ ಹರಿಯುತ್ತ
ಬಂಧನವ ಬಿಡಿಸುತ್ತ ಸ್ವಾತಂತ್ರ್ಯ ನೀಡೆನಗೆ
ನಡೆಮುಂದೆ ಎನ್ನುತ್ತ ದೂಡೆನ್ನ ಪ್ರೇರಣೆಯೇ !
ಆತ್ಮರಾಜ್ಯದ ಅರಸ ಆನಾಗಿ ಬಾಳ್ವಂತೆ

೪

ಸತ್ಯ ಸೌಂದರ್ಯತೆಗೆ ತವಶಕ್ತಿಯೆ ಕಾರಣವು
ಗುಡಿಗಡುವೆ ತೋರಣವು ಭಾವಕ್ಕೆ ಪೋಷಣವು
ಒಣಗುತಿಹ ವೃಕ್ಷಕ್ಕೆ ಚಿಗರೊಡಿಸಿ ಹೂ ಬಿಡಿಸಿ
ಫಲಗಳಂ ನೀಡುವಾ ನಿಜಶಕ್ತಿ ನಿನ್ನೊಳಗೆ

೫

ಎತ್ತನೋಡಿದಡತ್ತ ತುಂಬಿಹುದು ಕತ್ತಲೆಯು
ರವಿಕಿರಣ ಪ್ರತಿಬಿಂಬ ಬೀಳಿಸೈ ದಯದೀ
ತಿಳಿನೀರ ಸಿಂಚಿಸುತ ವನವೆಲ್ಲ ಬೆಳಗಿಸೈ
ಪೊಗ್ಗೆಗಳನರಳಿಸಿ ಸೌರಭವಬೀರಿ ಮುದದಿ

# ಬಡವ

೧

ಒಡತನದ ಜೀವತಾ
ದುಃಖದಾಗರವೆಂದು
ಒಡತನವೆ ! ಉಪಹಾಸ
ಕಪಮಾನಕೆಡೆಯೆಂದು
ಒಡತನದ ಬೇಗೆಯಲಿ
ಬೆಂದಿಹುದು ಬಾಳೆಂದು
ಅಳಲದಿರು ಒಳಲದಿರು
ಒಳಲಿ ನೀ ಚಿಂತಿಸದಿರು

೨

ಒಡತನದಿ ಕವಿ "ಮಾಘ"
ಕಾಲಿದಾಸರು ಮೇಣ್
"ಷಾ" "ಷೆಲ್ಲಿ" ಹುಟ್ಟಿದರು
ಕಟ್ಟಿದರು ಕಾವ್ಯದಾ
ರಾಜ್ಯವನು ಸ್ಥಿರವಾ
ಗುಳಿಸಿದರು ಬೆಳಸಿದರು
ಚಿರಶಾಂತಿ ಪಡೆದಿಹರು

೩

ಹೃದಯ ಧನವಿರುತಿರಲು
ಆನಂದವಡೆಯಲ್ಕೆ
ಮತ್ತೇಕೆ ಅಳಿಯದು ?
ಅಳಿಯುತಿಹ ಹೊರಧನಕೆ
ಅರಳಿರುವ ಕಮಲ ತಾ
ಕರೆಯುವದೆ ಮನುಜರಂ ?
ಬಂಗಾರ ಘಟ್ಟಿಯದು
ಉರುಳುತ್ತ ಒರುವದೇಂ ?

೪

ಹೃದ್ಭೂಮಿ ಸ್ವಚ್ಛವಿರೆ
ಕಾಳುಗಳು ದೊರೆಯವೇಂ ?
ಒಡವಾದರೇನಂತೆ
ಸಾಹಿತ್ಯ ಬೆಳೆಸಲ್ಕೆ
ಭಾವದಾ ಕಿರಣಗಳು
ಬೆಳಗುತ್ತ ಹೋದಂತೆ
ಒಡವನೇ ಚಿರಧನಿಕ
ನಾಗಿತಾ ಮೆರೆವವಂ

# ವಿಜಯೋತ್ಸವ

೧

ಕತ್ತಲಲಿ ಹೊರಟಿರುವೆ ವಿಜಯೋತ್ಸವಕೆ ನಾ
ಎತ್ತ ನೋಡಿದಡತ್ತ ಬಿದ್ದಿಹವು ಕಲ್ಬಂಡೆಗಳ್
ಕುತ್ತಿಗೆಯನೆತ್ತಿದೊಡೆ ಮುತ್ತಿಹುದು ಮೋಡವದು
ಎತ್ತರದ ದಿಬ್ಬದೊಳು ಅತಿಮಬ್ಬು ತಬ್ಬಿಹುದು

೨

ವಿಜಯದಾಶೆಯದು ತಾತುಂಬಿಹುದು ಮನದೊಳಗೆ
ವಿಜಯವನು ಪಡೆಯಲ್ಕೆ ಬಲವಿಲ್ಲದಾಗಿಹುದು
ಬೆಳಕಿರದೆ ವಿಜಯವನು ಪಡೆಯುವನ ಹಂಬಲವು
ಪರ್ವತಕೆ ಕಲ್ಲುಗಳ ನೆತ್ತಿತಾ ಹೊತ್ತಂತೆ

೩

ವನವೆಲ್ಲ ಹಸನಾಗಿ ಬಳ್ಳಿಗಳು ಹಸುರಾಗಿ
ಗಿಡವೆಲ್ಲ ಹೂಗಾಯಿ ಪಣ್ಗಳಿಂ ತುಂಬಿದೊಡೆ
ಸೌಗಂಧ್ಯ ಧೂಪವದು ವನವನಾವರಿಸಿದೊಡೆ
ವಿಜಯತಾ ಮೊರೆಯುವದು ಬೆಳಗುವದು ಚಿರಕಾಂತಿ

೪

ವಿಜಯದಿಂ ಸಾಮ್ರಾಜ್ಯ ವಿಜಯದಿಂ ಸರ್ವಸುಖ
ವಿಜಯವೇ ಜೀವನಕೆ ಚೇತನವು ಕೀರುತಿಯು
ಸಂತೋಷ ಶರಧಿಯೊಳು ಈಜಿತಾ ಮುನ್ನಡೆಯೆ
ವಿಜಯವೇ ಕಾರಣವು ಶಕ್ತಿಗಾಸರ ಕಂಭವು

೧

ವನದೊಳಗೆ ಕುಳಿತಿರುವ ಅಂತರತಮ ಗುರುದೇವ
ವಿಜಯೋತ್ಸವವನು ಗೈವ ಶಕ್ತಿಯನು ನೀಡೈ
ಬಾಗುವೆನು ಭಕುತಿಯಿಂ ಬೇಡುವೆನು ನಿನ್ನನಿದೋ
ವಿಜಯರಾಜ್ಯದಿ ನಿತ್ಯ ಕುಳ್ಳಿರಿಸು ಓ ತಂದೆ

# ಪುರಸ್ಕಾರ

ಕವಯಿತ್ರಿ ಶ್ರೀಮತಿ ಸರೋಜಿನಿ ನಾಯ್ಡು ಅವರ Guerdon ಎಂಬ
ಕವನದ ಭಾವಾನುವಾದ

೧

ವನಗಳಿಗೆ ಹೊಲಗಳಿಗೆ
ವಸಂತ ಋತುವಿನ ತೆರದಿ
ತರತರದ ಪೂಗಳಿಂ
ಸಿಂಗರಿಸು ಮುದದಿಂದ
ಇಂಪಾಗಿ ಹಾಡುತಿಹ
ಹಕ್ಕಿಯಾ ರೆಕ್ಕೆಗಳಿಗೆ
ಅಭಿಮಾನ ಶಕ್ತಿಯನು
ಭರದಿಂದ ನೀಡಯ್ಯ
ಮೃಗಗಳಿಗೆ ಕೊಡು ನೀನು
ಸೌಂದರ್ಯ ಗತಿಯನ್ನು
ನನಗೆ ನೀ ಕೃಪೆಮಾಡು
ಅತ್ಯಧಿಕ ಪ್ರೇಮವನು

೨

ಸಾಗರದಿ ಈಸುವಗೆ
ರತ್ನವನು ದೊರಕಿಸ್ಸೈ
ಗುಣವರಗೆ ಕೊಡುಬೇಗ
ಗುಣವುಳ್ಳ ಕನ್ಯೆಯನು
ಸ್ವಪ್ನ ದೃಷ್ಟಾರಂಗೆ
ಸ್ವಪ್ನ ಸಿದ್ಧಿಯ ನೀಡು
ನನಗೆ ನೀ ಕೃಪೆಮಾಡು
ಸತ್ಯ ಸಂಸಿದ್ಧಿಯನು

೨

ಧರ್ಮದಾ ಗುರುಗಳಿಗೆ
ಧರ್ಮದಾನಂದಕೊಡು
ಆಳುತಿಪ ರಾಜರಿಗೆ
ವಿಜಯ ಪ್ರಾಪ್ತಿಯ ನೀಡು
ಸ್ತೋತವಗೆ ಮಾನಸಿಕ
ಶಾಂತಿಯನು ಕರುಣಿಸೈ
ಓ ನನ್ನ ಗುರುದೇವ
ಕೃಪೆಮಾಡು ನೀನೆನಗೆ
ಕವಿತೆಯಾ ಶಕ್ತಿಯದು
ಕುಡಿವರೆದು ಬೆಳೆವಂತೆ

# ಮಾತೃಭೂಮಿ

( HOME LAND ಎಂಬ ಕವನದ ಭಾವಾನುವಾದ )

೧

ತಿರುಗುತಿರುವೆ ಕ್ಲಾಂತನಾಗಿ ಒಬ್ಬನಾಗಿ ಕಾರ್ಯವಿರದೆ
ಮರುಗುತಿರುವೆ ಮನೆಯಬಿಟ್ಟು ಮನವಸುಟ್ಟು ಗೆಳೆಯರಿರದೆ
ಕೊರಗಿ ಕರಗಿ ಸೊರಗುತಿರುವೆ ಪ್ರಬಲ ಇಚ್ಛೆಯಲ್ಲಿ ನೊಂದು
ನರಳುತಿರುವೆ ಮಾತೃಭೂಮಿ ಕಾಣ್ವ ಬಯಕೆ ಬೆಂದು

೨

ಬಿಟ್ಟು ಬಿಡಲಿ ಗೆಳೆಯರೆನ್ನ "ಓ ಮಧುರ ಮಾತೃಭೂಮಿ"
ಕಷ್ಟಕೊಟ್ಟು ತೆಗಳಲನ್ಯ ದೇಶದವರು ಶತೃತನದಿ
ದೃಷ್ಟಿಯಲ್ಲಿ ನೀಚಭಾವ ವಿಟ್ಟುನೋಡುತಿರಲಿ ಸದಾ
ಕಷ್ಟಕಳೆವ ಮಾತೃಭೂಮಿ ಪ್ರೇಮವನ್ನು ಮರೆಯಲೆಂತು ?

೩

ಮಾತೃಭೂಮಿ ಮಕ್ಕಳೆಲ್ಲರೊಡನೆ ತಾವು ಕೂಡಲೆಂದು
ಪ್ರಾರ್ಥಿಸುವೆನು ಭಕ್ತಿಯಿಂದ ಶಿವನು ಶಾಂತಿ ನೀಡಲೆಂದು
ಕೂಡಿಕೊಂಡು ಮಾಡುತಿರುವ ಕಾರ್ಯದಲ್ಲಿ ಶಕ್ತಿಯುಂಟು
ನಾಡದೇವಿ ಕೃಪೆಯದುಂಟು ಪ್ರಾಂತವುಂಟು ಕಾಂತಿಯುಂಟು

೪

ಬಯಸುತಿರುವೆ ನನ್ನ ಮಾತೃಭೂಮಿಯಲ್ಲಿ ಇರಿಸಲೆಂದು
ಆಶೆಯನ್ನ ತುಂಬುತಿಹುದು ಶ್ವಾಸವಲ್ಲಿ ಹೋಗಲೆಂದು
ನನ್ನ ಮರಣ ಹರಣವಾಗಲಂತ್ಯಕ್ರಿಯೆಯದಾಗಲೆಂದು
ಕೋರುತಿರುವೆ ಮಾತೃಭೂಮಿ ಮಧುರಶಾಂತಿ ದೊರೆಯಲೆಂದು

೫

ಬಯಸಲಾರೆ ವಿಪುಲಧನವ ಅಳಿಯುತಿರುವ ಕೀರ್ತಿಯನ್ನು
ಜನ್ಮಭೂಮಿಯಲ್ಲಿ ನಾನು ಬಡವನಾಗಿ ಬಾಳಬಲ್ಲೆ
ಅನ್ಯದೇಶದಿರುವದೊಲ್ಲೆ ಬೇಡುತಿರುವೆನಿದನೆ ಶಿವನೆ
ಜವದಿ ಮಾತೃಭೂಮಿ ಸೇವೆ ಮಾಡಲಿಕ್ಕೆ ಕಳುಹಿಸೆನ್ನ

# ಉತ್ತಿಷ್ಠತ!

೧

ಸಾಕಿನ್ನು ಎದ್ದೇಳಿ ಮೋಹನಿದ್ರೆಯಬಿಟ್ಟು
ಹೊರಬನ್ನಿ ಭರದಿಂದ ಜ್ಞಾನವಸ್ತ್ರವನುಟ್ಟು
ಮನದೊಳಗೆ ತುಂಬಿರುವ ಕಾಮದಾಶೆಯ ಸುಟ್ಟು
ತನುವಿನೊಳು ಹೊಕ್ಕಿರುವ ಭ್ರಾಂತಿಯನು ಬಿಟ್ಟು

೨

ಭಾಸ್ಕರನು ಬಂದಿಹನು ಬೆಳಕನ್ನು ತಂದಿಹನು
ಮೊಗ್ಗೆಗಳು ಕರೆಯುವವು ತಮ್ಮೊಡನೆ ಅರಳಲ್ಕೆ
ಎಲರು ತಾ ಬೀಸುತ್ತ ಕೊಡುತಿಹುದು
ಪಕ್ಷಿಗಳು ಹಾಡುವವು ಕಣ್ದೆರೆದು ಸಂತಸದಿ

೩

ಕಿರಣಗಳು ಹಬ್ಬುವವು ಮಬ್ಬನ್ನು ದೂಡುತ್ತ
ನಾವಿನ್ನು ಮಬ್ಬಿನೊಳು ಮಲಗುವದು ತರವಲ್ಲ
ಗುರುದೇವ ಕೊಟ್ಟಿಹನು ನಮಗೆಲ್ಲ ಬುದ್ಧಿಯನು
ಹಚ್ಚಿಹನು ಸನ್ಮಾರ್ಗ ಮರೆಯುಲು ಒಳಿತಲ್ಲ

೪

ತೆರೆಯಿರೈ ಒಳಗಣ್ಣ ಹರಿಯಿರೈ ಹಗ್ಗವನು
ಮುರಿಯಿರೈ ಮದವನ್ನು ತೊರೆಯಿರೈ ಶೋಕವನು
ಅರಿಯಿರೈ ಮುಂದಿನಾ ಹಿರಿಗುರಿಯ ದಾರಿಯನು
ಸ್ಮರಿಸಿರೈ ದೇವನಂ ನಿಷ್ಕಾಮಭಾವದಲಿ

೫

ಜರಿಯೋಣ ಜವದಿಂದ ಸಂಸಾರ ಜಂಜಾಟ
ಮನಸಿನ ಶಾಂತಿಯನು ಕಳೆದೇಕೆ ಹೋರಾಟ ?
ರತ್ನವನು ಹುಡುಕುತ್ತ ಮತ್ತೇಕೆ ಅಲೆದಾಟ ?
ಆಡೋಣ ಮಾಡೋಣ ಶಿವಶಕ್ತಿಯೊಡನಾಟ

೬

ನಮಗಾಗಿ ಕೊಟ್ಟಿಹನು ಈಶ್ವರನು ಎಲ್ಲವನು
ಅರಿವರಿದು ಭಾವಿಯೊಳು ದುಡುಕಿದರೆ ಸುಖವುಂಟೆ ?
ವಿಷದ ಬಟ್ಟಲ ಬಿಸುಟು ಸುಧೆಯನೀಂಟುವುದೊಳಿತು
ವಿಷದ ಸೇವನೆಯಿಂದ ನಶಿಸುವುದು ಈ ಬಾಳು ?

೭

ಪ್ರಕೃತಿ ರಂಗದಿ ಬಾಳಿ ಸಂಪತ್ತುಗಳಿಸೋಣ
ಪ್ರಾಕೃತಿಕ ಭಾವದೊಳು ಸತ್ಯತೆಯ ಕಾಣೋಣ
ಪ್ರಕೃತಿದೇವಿಯನು ಭಕ್ತಿಯಿಂದ ಪೂಜಿಸುತ
ಚಿದಾನಂದವ ಪಡೆದು ಹರುಷದಿಂ ನಲಿಯೋಣ

೮

ಸಾಗೋಣ ಒಮ್ಮನದಿ ಒಗ್ಗೂಡಿ ಮುಂದಕೆ
ನೀಗೋಣ ಹಿರಿಕಿರಿದು ಭೇದವನು ಹಿಂದಕೆ
ಮೂಡೋಣ ಶಿವಜೀವ ರಥವನ್ನು ಸಗ್ಗಕೆ
ಆದರ್ಶರಾಗೋಣ ಅನ್ಯಸಮಾಜಕೆ

೯

ಶಕ್ತಿತಾನಿಲ್ಲೆಂದು ಕೂಡುವದು ಹಿತವಲ್ಲ
ಸೋಲುತಾ ಬರುತಿರೆ ಹೆದರುವದು ಹಿತವಲ್ಲ
ಕ್ಷಣದೊಳಗೆ ಶಿಲೆಕೆತ್ತಿ ಗುಡಿಕಟ್ಟ ಬಲ್ಲೆಯೇಂ ?
ಚಿತ್ತದಲೆ ಕಾಳುಗಳು ಸಿಗಲೆಂದರೇಂ ಸಾಧ್ಯ?

೧೦

ದುಡಿಮೆಯೆ ಮಾನವನ ಬಾಳಿಗಿದು ಹಿರಿಬೆಳಕು
ದುಡಿದಂತೆ ದೂರಹುದು ಮೆತ್ತಿರುವ ಮನಕೊಳಕು
ದುಡಿಯಲಾರದ ವ್ಯಕ್ತಿ ಬಿದ್ದಿರುವ ಹೆಣದಂತೆ
ದುಡಿವವನ ದಿಟಬಾಳು ರನ್ನ ಗನ್ನಡಿಯಂತೆ

೧೧

ಎದ್ದೇಳಿ ನಡೆಯೋಣ ಭಕ್ತಿ ಭಿಕ್ಷೆಯ ಬೇಡಿ
ಸಿದ್ಧರಿರಿ, ನೀವೆಲ್ಲ ವಿರತಿ ಗಂಧವತೀಡಿ
ಸಿದ್ಧ ಗುರುಕುಮಾರನ ಭಜನೆಯನು ಮಾಡಿ
ಶುದ್ಧಾತ್ಮರಾಗೋಣ ನಿಷ್ಕಪಟದಿಂಕೂಡಿ

# ವಿಜಯಮಹಾಂತಯೋಗಿಯೆ !

೧

ಅರಿಗಳಾರನು ಸುಳಿದು ತರಿದಿಹ
ವೀರವಿರತನೆ ವಿಜಯಶಾಲಿಯೆ
ಅರಿಯುತಾರನು ಅರುಹಿ ಮೆರೆದಿಹ
ಚಾರು ಚರಿತನೆ ಸುಜನಲೋಲನೆ
ಭಕ್ತಜನರಿಗೆ ಮುಕ್ತಿಮಾರ್ಗವ
ಯುಕ್ತಿಯಿಂದಲಿ ತಿಳುಪಿದಾತನೆ
ಎತ್ತಪೋದೆಯೊ ಹೃದಯಮೂರ್ತಿಯೆ
ಸಪಮಲಾಂತಃಕರದ ಜ್ಯೋತಿಯೆ

೨

ಯೋಗವಿದ್ಯೆಯು ದಿವ್ಯದೀಪ್ತಿಯು
ದಿಗ್ ದಿಗಂತದಿ ಬೆಳಗಲೆನ್ನುತ
ಯೋಗಮಂದಿರ ತಾಣತೋರಿಸಿ
ಯೋಗಕೀರ್ತಿಯ ನುಳಿಸಿ ಬೆಳಗಿದೆ
ಯೋಗ್ಯದಿಂದಲಿ ಶಕ್ತಿವೃದ್ಧಿಯು
ತ್ಯಾಗಬುದ್ಧಿಯು ಬುದ್ಧಿ ವೃದ್ಧಿಯು
ಯೋಗದಿಂದಲಿ ಭಾವಶುದ್ಧಿಯು
ಬಹುದು ತಪ್ಪದು ಎಂದು ತಿಳುಹಿದೆ

೩

ಧ್ಯಾನಶಕ್ತಿಯ ದಿವ್ಯಬಲದಿಂ
ಭವ್ಯಮೂರ್ತಿಯು ಬೆಳೆದು ಬಾಳಿದೆ
ಶಿವನಧ್ಯಾನದಿ ಲೀನನಾಗುತ
ಶಿವನರೂಪವ ತಾಳಿಹೊಳೆದೆಯೊ

ಜ್ಞಾನದೃಷ್ಟಿಯ ನವ್ಯ ತೇಜದಿ
ಅಜ್ಞ ಜನಗಳ ಜಾಢ್ಯಕೊಚ್ಚಿದೆ
ಜ್ಞಾನಭಾನುವೆ ಗುರುವರೇಣ್ಯನೆ
ಚರವರೇಣ್ಯನೇ ಪರಮಪೂಜ್ಯನೆ !

೪

ನಿನ್ನ ನೆನೆವುದು ಭಕ್ತವೃಂದವು
ಶ್ರೀ ವಿಜಯಮಹಾಂತೇಶಯೋಗಿಯೆ !
ಬನ್ನ ಪಡುತಿಹ ಮನುಜರನು ನೀ
ನುದ್ಧರಿಸಿ ಕಾಯೋ ಗುರುವರಾ

ಮಾಯೆ ಬೀಸಿಹ ಬಲೆಗೆ ಬೀಳುತ
ಘಾಸಿಯಾಗುತ್ತಿಹೆವು ದೇವಾ
ಕಾಯಜಾರಿಯೆ ಸಲಹು ಜವದೊಳಾ
ನಿನ್ನ ಧ್ಯಾನದ ಶಕ್ತಿ ನೀಡೈ

ನಿನ್ನ ಜೀವನವೆಮಗೆ ಪಾವನ
ವನ್ನಿಸುತ್ತಲಿ ದಿವ್ಯದೃಷ್ಟಿಯಿಂ
ಚನ್ನಮಾರ್ಗದಿ ಕರೆದುಕೊಳ್ಳುತ
ಶಾಂತಿಯೊಳಿರಿಸು ಓ ತಪಸ್ವಿಯೆ !

ನಾವು ಬಾಲರು ನೀನು ಒಡೆಯನು
ಕಾವಭಾರವು ನಿನ್ನದಯ್ಯಾ
ಜೀವಜ್ಯೋತಿಯೆ ಗುರುಮಹಾಂತನೆ
ಎನ್ನ ಹೃನ್ಮನ ತುಂಬಿ ಕಾಯ್ವೈ

# ಪ್ರಾರ್ಥನೆ

೧

ಉರಿಬಿಸಿಲ ತಾಪದಿಂ ಬಲುಬಳಲಿ ಬೆಂದಿಹೆನು
ಕುಡಿಯಲ್ಕೆ ನೀರಿರದೆ ಕೊರಗಿ ಕಂದಿಹೆನು
ಮರುಭೂಮಿಯೊಳು ಸುತ್ತಿ ಕಾಲ್ಸುಟ್ಟುಕೊಂಡುನಾ
ಹೃದಯಾಗ್ನಿಯಾರಿಸಲು ದ್ವಾರಬಳಿ ಬಂದಿಹೆನು

೨

ನಾ ಬರುವ ದಾರಿಯೊಳು ವೃಕ್ಷಗಳು ಕಾಣಿಸದೆ
ಹುಡಕಿಹುಡುಕಿ ಬೇಸತ್ತು ಕಲ್ಬಂಡೆ ತುಳಿಯುತ್ತ
ಸುತ್ತೆಲ್ಲ ತಿರುಗಿದರೂ ನೀರೆನಗೆ ದೊರೆಯದತಿ
ಮರಮರುಗಿ ತಿರುತಿರುಗಿ ಮುಳ್ಕಂಟಿತುಳಿದಿರುವೆ

೩

ಹೃದಯತಾ ಒಣಗಿಹುದು ಬಲವಿಲ್ಲದಾಗಿಹುದು
ಸಿಹಿಕಹಿಗಳನುಂಡು ಬೇಸತ್ತು ನೊಂದಿಹುದು
ಬಲ್ಗಿಚ್ಚಿನಂತಿರುವ ನೆಲವನ್ನು ತುಳಿಯುವದು
ಜೀವಕಿದು ಸಾಕೆಂದು ಬೇಡುತಿಹೆ ನಿನ್ನನ್ನೇ

೪

ನಿನ್ನಡಿಯ ಪಿಡಿಯುವದು ಬಲುಕಷ್ಟಕರವೆಂದು
ಯೋಗಿಗಳು ತ್ಯಾಗಿಗಳು ಜ್ಞಾನಿಗಳು ಮೇಣ್ ಶರಣರು
ನಿನಗಾಗಿ ತಪಿಸಿದರು ಕಷ್ಟವನು ಸಹಿಸಿದರು
ಧ್ಯಾನದಲಿ ಕೂಡಿದರು ಶಾಂತಿಯನು ಪಡೆದಿಹರು

ಮನೆಯೊಳಗೆ ಕುಳಿತಿರುವ ಅಂತರತಮ ಗುರುದೇವ
ಕಣ್ದೆರೆದು ನೋಡಯ್ಯ ಕರುಣೆಯನು ನೀಡಯ್ಯ
ಬಾಯ್ದೆರೆದು ಒಟ್ಟಲವ ಹಿಡಿದು ನಾನಿಂತಿರುವೆ
ಸವಿನೀರನಿತ್ತೆನಗೆ ಮನೆಯೊಳಗೆ ಕರೆದುಕೋ

## " ಪಥಿಕದ ನೆನಹು "

" ಪಥಿಕ " ಕವನ ಸಂಕಲನವು ೧೯೫೪ರಲ್ಲಿ ಪ್ರಕಟವಾಗಿದ್ದರೂ ಅದರಲ್ಲಿಯ ಕವನಗಳ ರಚನೆಯ ಕಾಲ ೧೯೫೦ ಕ್ಕೆ ಪೂರ್ವದ್ದೆಂದು ತೋರುತ್ತದೆ. ಅಂತೆಯೇ ಆ ಕವನಗಳಲ್ಲಿ ನವೋದಯ ಕಾಲದ ದೃಷ್ಟಿ ಸ್ಪಷ್ಟವಾಗಿದೆ. ಈ ಸಂಕಲನದಲ್ಲಿ ೪೦ ಕವನಗಳಿವೆ. ಅವು ಚಿಂತನಪರವಾಗಿವೆ.

ಬಾಳಿನಲ್ಲಿ ನವಿಲಿನಂತೆ ನೋವು ಇದೆ. ಚಿಂತನಶೀಲನಾದ ಕವಿಗೆ ಬಾಳು ಹಲವಾರು ತೊಡಕುಗಳನ್ನು, ಸಮಸ್ಯೆಗಳನ್ನು ಒಡ್ಡುತ್ತಿದೆ. ಬಾಳಿನ ಸಮಸ್ಯೆಗಳು ಆಗಾಗ ಆತನ ಮನಸ್ಸನ್ನು ಗಾಸಿಗೊಳಿಸುತ್ತಿದೆ. ಆದರೆ ಶ್ರದ್ಧೆಯಿಂದ ಕೂಡಿದ ಕವಿಯು ದೈವೀಕೃಪೆ ಗುರುಕರುಣೆಗಳನ್ನು ಹಾರೈಸುತ್ತ ಬಾಳನ್ನು ಒಂದು ಪಯಣವಾಗಿ ಭಾವಿಸಿ ಧೀರಪಥಿಕನಂತೆ ಮುಂದೆ ಸಾಗಲು ನಿರ್ಧರಿಸುತ್ತಾನೆ. ಇಂತಹ ಮೂಡಿದ ಕವನಗಳು ಈ ಸಂಕಲನದಲ್ಲಿವೆ.

ಸ. ಸ. ಮಾಳವಾಡ

## ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಜಗದ್ಗುರುಗಳು ರಚಿಸಿದ ಕೃತಿಗಳು

೧. ಮೊಗ್ಗೆಯ ಮಾಲೆ (ದ್ವಿತೀಯಾ ವೃತ್ತಿ)
೨. ಪೂಮಾಲೆ (ಕಂದ ಪದ್ಯ) "
೩. ಮರುಳಸಿದ್ಧೇಶ್ವರ ಅಷ್ಟೋತ್ತರ ಶತನಾಮಾವಳಿ
೪. ಶಿವಬಸವೇಶ್ವರ ಅಷ್ಟೋತ್ತರ ಶತನಾಮಾವಳಿ... (ಆರನೆಯ ಮುದ್ರಣ)
೫. ಪಥಿಕ (ಕವನ ಸಂಕಲನ) ದ್ವಿತೀಯಾವೃತ್ತಿ
೬. ವಿಜಯ ಮಹಾಂತೇಶ ಲಾವಣಿ
೭. ಅಪ್ಪಯ್ಯ ಸ್ವಾಮಿಗಳವರ ಚರಿತೆ (ಗದ್ಯ)
೮. ಅಮೃತಜೀವ (ಗದ್ಯ)
೯. ಹೊಂಗಿರಣ (ಗದ್ಯ)
೧೦. ಜೀವನ ವಿಕಾಸ ( " )
೧೧. ಆಶೀರ್ವಾಣಿ (ಭಾಗ ೧)

## ಮುಂಬರುವ ಕೃತಿಗಳು

೧೨. ಚಿತ್ಸುಮನ (ವಚನ ಸಂಕಲನ) (ಅಚ್ಚಿನಲ್ಲಿ)
೧೩. ಜಗದ್ಗುರು ಗುರುಸಿದ್ಧೇಶ್ವರ ಅಷ್ಟೋತ್ತರ ಶತನಾಮಾವಳಿ (ಅಚ್ಚಿನಲ್ಲಿ)
೧೪. ವಿಜಯ ಮಹಾಂತೇಶ್ವರ ನಾಮಾವಳಿ (ಅಚ್ಚಿನಲ್ಲಿ)
೧೫. ರತ್ನಪಕ್ಷಿ (ಕವನ ಸಂಕಲನ)
೧೬. ಸಾಹಿತ್ಯ (ವಿವೇಚನಾತ್ಮಕ ಪ್ರಬಂಧ)
೧೭. ನಮ್ಮ ವಿದೇಶ ಯಾತ್ರೆ
೧೮. ಆಶೀರ್ವಾಣಿ (ಭಾಗ ೨)
೧೯. ವಚನ ವಾರಿಧಿ
೨೦. **Religion and Peace**